# ಕೊಡಗು ಸಂಗಾತಿ

ಮೇ 16 ರಿಂದ 31, 2001 | ಪಾಕ್ಷಿಕ ಪತ್ರಿಕೆ | (ಬೇಶ 2-17)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ | Registered : 10-01-96 TCI Kar. 09592 | ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88 | ಸಂಪುಟ : 5 | ಸಂಚಿಕೆ : 10 | ಪುಟಗಳು : 24 | ಬೆಲೆ ರೂ. : 6-00




← ಪ್ರಕಾಶ್ ತನ್ನ ಎಲ್.ಎಂ.ಜಿ. ಗನ್‌ನೊಂದಿಗೆ

ಒಂಭತ್ತು ವರ್ಷದ ಹಿಂದೆ ತರಬೇತಿ ಮುಗಿಸಿದ ಸಮಯದಲ್ಲಿ ಪ್ರಕಾಶ್ →







ಪ್ರಕಾಶ್ ಕಾಶ್ಮೀರ ಕಾರ್ಗಿಲ್ ಕಣಿವೆಯಲ್ಲಿ ಪಹರೆಯಲ್ಲಿ ತೊಡಗಿದಾಗ

## ರಾಜ್ಯದ ಗಡಿಭಾಗ ಕಾಶ್ಮೀರದಲ್ಲಿ ಉಗ್ರಗಾಮಿಗಳ ಧಾಳಿಗೆ ಕೊಡಗಿನ ಯೋಧ ಬಲಿ

## ತಾವ್‌ನಾಡಿನ ವೀರಯೋಧ ಅಮೆಮನೆ ಅಪ್ಪಾಜಿ ಪ್ರಕಾಶ್ ಇನ್ನಿಲ್ಲ

## ಮಡಿಕೇರಿ ಪುರಸಭೆ ಚುನಾವಣೆ - 2001

23 ಸ್ಥಾನದಲ್ಲಿ ಕಾಂಗ್ರೆಸ್ 10, ಬಿ.ಜೆ.ಪಿ. 9,ಪಕ್ಷೇತರ 2, ಪೌರಸಮಿತಿ 1, ಬಂಡಾಯ ಕಾಂಗ್ರೆಸು - 1, ಬಿ.ಜೆ.ಪಿಯ ನಡುಬೆಟ್ಟೀರ ಶೈಲಾಸುಬ್ಬಯ್ಯನವರಿಗೆ 1 ಓಟಿನಿಂದ ಸೋಲು, ಕೋಡಿಚಂದ್ರಶೇಖರ್‌ಗೆ ಪರಾಜಯ, 3 ಜನ ಗೌಡ ಅಭ್ಯರ್ಥಿಗಳು ಪುರಸಭೆಗೆ ಆಯ್ಕೆ

**ಕೂಡಕಂಡಿರ ಕಾವೇರಮ್ಮ ಸೋಮಣ್ಣ**
ಕಾಂಗ್ರೆಸ್



**ಬಿಟ್ರ ರಾಮಯ್ಯ**
ಕಾಂಗ್ರೆಸ್



**ಕಡ್ಲೇರ ರಾಘವಯ್ಯ**
**ಧರ್ಮಪಾಲ (ಪ್ರಭು)**
ಬಿಜೆಪಿ



**ಶೈಲಾ ಸುಬ್ಬಯ್ಯ**
ಬಿಜೆಪಿ



## ಶುಭ ಹಾರೈಕೆ



ಯಶೋದ ಕುಂಞ್ಞಪ್ಪ (12-05-1976)

ವೈವಾಹಿಕ ಜೀವನದ ರಜತೋತ್ಸವದ ಹೊಸ್ತಿಲಲ್ಲಿರುವ ಶ್ರೀ ಪೊಕ್ಕುಳಂಡ್ರ ಕುಂಞ್ಞಪ್ಪ ಯಶೋದ ದಂಪತಿಗಳಿಗೆ ಹಾರ್ದಿಕ ಅಭಿನಂದನೆಗಳು

ಶುಭ ಕೋರುವವರು :

ಬಡುವಂಡ್ರಸೀತಮ್ಮ ಪೂವಯ್ಯ, ಮರಗೋಡು
ಬಾರಿಯಂಡ್ರ ಚಂಗಪ್ಪ ಸುಶೀಲ, ಬೆಂಗಳೂರು
ಮುಕ್ಕಾಟೀರ ಬಾಲಕೃಷ್ಣ ಘುನಾವತಿ, ಮೈಸೂರು
ಬಡುವಂಡ್ರ ಗಿರಿಜೇಶ ಉಮಾವತಿ,ಬೆಂಗಳೂರು
ಬಡುವಂಡ್ರ ಕುಮಾರ ಪ್ರೇಮಾ, ಮರಗೋಡು
ಕರಕನ ಪೊನ್ನಪ್ಪ ಅನಿತಾ, ಗಾಳಿಬೀಡು
ಡಾ. ಬಿ. ಪಿ.ಆಶಾಕುಮಾರಿ, ಮೈಸೂರು
ಕಿರಣ್, ಕೀರ್ತಿ, ವಿದ್ಯಾ, ನಿಧಿ ನಿರಜ್, ಧನ್ಯ ದರ್ಶನ್, ದಿವ್ಯ, ದೀಪು

## ಚಂದದಾರರ ಗಮನಕ್ಕೆ

ಚಂದದಾರರು ಆದಷ್ಟು ಬೇಗ ವಾಯಿದೆ ಮುಗಿದ ತಕ್ಷಣ ನವೀಕರಿಸಿಕೊಳ್ಳಬೇಕು. ತಿಳುವಳಿಕೆಗಾಗಿ ಪತ್ರವನ್ನು ಹಾಕುತ್ತಿರುತ್ತೇವೆ. ಅದರಂತೆ ವಿಳಾಸದ ಮೇಲ್ಭಾಗ ದಿನಾಂಕವನ್ನು ಬರೆಯಲಾಗುವುದು. ಸಹೃದಯ ಓದುಗರು ಅರಿತು ಕಳುಹಿಸಬೇಕು. ನೆನಪಿರಲಿ. ಮನೆ ಮನೆಗೆ ಬಂದು ವಸೂಲಾತಿ ಬಹಳ ತ್ರಾಸದ ಕೆಲಸ. ಸಂಗಾತಿಯ ಬೆಳವಣಿಗೆಗೆ ದಯವಿಟ್ಟು ಸಹಕರಿಸಿ. ಕಠಿಣ ಶ್ರಮದಲ್ಲಿ ಸೋಲುತ್ತಿದ್ದೇವೆ.

- **ಪಟ್ಟಡ ಪ್ರಭಾಕರ,** ಗೌರವ ಸಂಪಾದಕ

## ಸಾಕು ನಾಯಿ ಪ್ರದರ್ಶನ

ಮೈಸೂರು ನಗರದ ಮೈಸೂರು ಕೆನಲ್ ಕ್ಲಬ್ ಬರುವ ಜೂನ್ 3ರಂದು ಭಾರತ್ ಸ್ಕೌಟ್ ಮತ್ತು ಗೈಡ್ಸ್ ಮೈದಾನದಲ್ಲಿ ಸಾಕು ನಾಯಿಗಳ ಪ್ರದರ್ಶನವನ್ನು ಆಯೋಜಿಸಿದೆ.

ಹೆಚ್ಚಿನ ಮಾಹಿತಿಗೆ **ಪ್ರೀತಿ ಡ್ರಗ್ ಹೌಸ್**, ನಾರಾಯಣ ಶಾಸ್ತ್ರಿ ರಸ್ತೆ, ಮೈಸೂರು (428097), **ರಾಜ್‌ಕಮಲ್ ಕೆನಲ್ಸ್**, ಹಾಂಕಾಂಗ್ ಬಜಾರ್ ಎದುರು, ರಾಜಕಮಲ್ ಚಿತ್ರಮಂದಿರ ರಸ್ತೆ, ಮೈಸೂರು (429455), **ಎಸ್. ಎಸ್. ಕೆನಲ್ಸ್**, ಆನಂದ್ ವಿಹಾರ್ ಕಲ್ಯಾಣ ಮಂಟಪ ಹಿಂಭಾಗ, ಮೈಸೂರು (432626), **ರಾಘವೇಂದ್ರ ಫಾರ್ಮಾ**, ಶಿವಾಯನ ಮಠದರಸ್ತೆ, ಮೈಸೂರು (430449) ವಿಳಾಸವನ್ನು ಸಂಪರ್ಕಿಸುವಂತೆ ಪ್ರಕಟಣೆ ತಿಳಿಸಿದೆ.

## ಸ್ವರ್ಗಸ್ಥ ರಾದೊ

ಕಾಂತುಬೈಲು-ಚೆಂಬು ಗ್ರಾಮದ ಕೆದಂಬಾಡಿ ಶಿವಣ್ಣನವು ತಾರೀಖ್ 4-5-2001ಕ್ಕೆ ವೈಕುಂಠವಾಸಿಯಾದೊ. ಇವುಕ್ಕೆ 59 ವರ್ಸ ಪ್ರಾಯ ಆಗಿತ್ತ್. ಇವು ಮುರ್ ಮಕ್ಕಳನ್ನ ಮತ್ತೆ ಅಪಾರ ಸಂಬಂಧಿಕರನ್ನ ಅಗಲಿಯೊಳೊತ ತಿಳ್ದ್‌ಬಂದುಟ್ಟು

- **ಸಂಗಾತಿ**



# 2001, ಮೇ 16 ರಿಂದ 31ರ ತನಕ

ಒಳನೋಟ 



**ಅರೆಭಾಷಿಕ ವಿಭಾಗ** : ದಲ್ಲಿ ಅನಿವಾರ್ಯವಾಗಿ ಯಾವುದನ್ನು ಮುದ್ರಿಸಲಾಗದಿರುವುದಕ್ಕೆ ವಿಷಾದಿಸುತ್ತೇವೆ.


| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ**, 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
|  ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | ಕುಂಭಗೌಡನ ಪ್ರವೀಣ್ ಕುಮಾರ್, ವೆಜಿಟೆಬಲ್ ಶಾಪ್, ಪಾಂಡನ ಕಾಂಪೌಂಡ್, ಅಪ್ಪಯ್ಯ ಗೌಡ ರಸ್ತೆ, ಮಡಿಕೇರಿ. |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |


 ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಜೀವನದ ಮೌಲ್ಯ

ಈ ಪ್ರಪಂಚದಲ್ಲಿ ಎಲ್ಲಾ ಧರ್ಮಗಳು ಮತ್ತು ಅಧರ್ಮಗಳ ಪವಿತ್ರ ಗ್ರಂಥಗಳು. ಮಾನವನ ಜೀವನದ ಮೌಲ್ಯಗಳ ವಿಷಯದಲ್ಲಿ ಜನರಿಗೆ ಬೋಧಿಸುತ್ತಾ ಬಂದಿವೆ. ಆದರೆ ಮಾನವನ ಸ್ವಾರ್ಥ, ಅಸೂಯೆ, ಅಹಂಕಾರ ಮಾತ್ರ ಕಡಿಮೆಯಾಗಲಿಲ್ಲ. ಎಲ್ಲಾ ಪುಣ್ಯ ಗ್ರಂಥಗಳು ಹಾಗೂ ಬೋಧಕರು ಅಂದಿನಿಂದ ಇಂದಿನವರೆಗೆ ಇವುಗಳನ್ನು ನಿಗ್ರಹಿಸಬೇಕೆಂದು ಸಾರುತ್ತಲೇ ಇವೆ. ಒಂದು ಮತವನ್ನು ಇನ್ನೊಂದು ಮತದವರು ದೂರುತ್ತಿರುವುದು, ಇನ್ನೊಂದು ಮತದವರನ್ನು ತನ್ನ ಮತಕ್ಕೆ ಮತಾಂತರಿಸುತ್ತಿರುವುದು, ಒಂದು ಜಾತಿಯವರು ಇನ್ನೊಂದು ಜಾತಿಯವರನ್ನು ದ್ವೇಷಿಸುವುದು ಕಡಿಮೆಯಾಗಲಿಲ್ಲ.

ಇದೇ ರೀತಿ ರಾಜಕೀಯದಲ್ಲಿ ಎಲ್ಲಾ ರಾಜಕೀಯ ಪಕ್ಷಗಳೂ ಭ್ರಷ್ಟಾಚಾರ ನಿರ್ಮೂಲನಕ್ಕಾಗಿ ಉದ್ದುದ್ದ ಭಾಷಣಗಳನ್ನು ಜನರ ಮುಂದೆ ಮಾತಾಡುತ್ತಾರೆ. ಆದರೆ ಯಾವುದೇ ಪಕ್ಷ ಅಧಿಕಾರಕ್ಕೆ ಬಂದರೂ ಭ್ರಷ್ಟಾಚಾರ ಕಡಿಮೆ ಆಗಲಿಲ್ಲ. ಮದುವೆಯಾಗದೆ ಹುಚ್ಚು ಬಿಡದು, ಹುಚ್ಚು ಬಿಡದೆ ಮದುವೆಯಾಗದು ಎಂಬ ಗಾದೆಯಂತಾಗಿದೆ. ದಿನದಿಂದ ದಿನಕ್ಕೆ ಪ್ರತಿಯೊಬ್ಬನೂ ತನ್ನ ಮತ್ತು ತನ್ನ ಕುಟುಂಬದ ಸದಸ್ಯರ ಭೌತಿಕ-ಆಕಾಂಕ್ಷೆಗಳಿಗಾಗಿ ಹೋರಾಡುತ್ತಾರೆಯೇ ಹೊರತು ತಾನು ಹುಟ್ಟಿದ ದೇಶ, ಜನಾಂಗದ ಒಳಿತಿಗಾಗಿ ಶ್ರಮಿಸುವವರ್‍ಯಾರಿದ್ದಾರೆ. ನಾನು ಹಿಂದೂ ಎಂಬುದಾಗಿ ಹೇಳಿಕೊಳ್ಳುವುದೇ ಮಾತ್ರ. ಆದರೆ ಹಿಂದೂಗಳ ವೇದ, ಉಪನಿಷತ್ ಭಗವದ್ಗೀತೆಯ ವ್ಯಾಖ್ಯಾನಗಳನ್ನು ಪಾಲಿಸುವ ಹಿಂದೂ ಜನರಿದ್ದಾರೆ. ಅದೇ ರೀತಿ ಬೈಬಲಿನಲ್ಲಿ ಹೇಳುವ ಮಾತನ್ನು ಖುರಾನಿನಲ್ಲಿ ಬೋಧಿಸುವ ಬೋಧನೆಗಳನ್ನು ಆಚರಿಸುವ ಕ್ರೈಸ್ತ ಮಹಮದೀಯರು ಎಷ್ಟೋ ಜನರಿದ್ದಾರೆ.

ಇವುಗಳನ್ನೆಲ್ಲಾ ಅನುಷ್ಠಾನಕ್ಕೆ ತಂದರೆ, ಜಗಳಗಳಿಲ್ಲ. ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಜಗಳವೇಕೆ? ಸ್ವಾಮಿ ವಿವೇಕಾನಂದರು ಹೇಳಿದಂತೆ ಮನುಷ್ಯ ಮೀನಿನಂತೆ ನೀರಿನಲ್ಲಿ ಚಲಿಸಲು ಕಲಿತಿದ್ದಾನೆ. ಹಕ್ಕಿಯಂತೆ ಆಕಾಶದಲ್ಲಿ ಹಾರಾಡಲು ಕಲಿತಿದ್ದಾನೆ. ಆದರೆ ಮನುಷ್ಯನನ್ನು ಮನುಷ್ಯನನ್ನಾಗಿ ತಿಳಿದು ಕೊಂಡಿಲ್ಲವೆಂಬ ಮಾತು ಸತ್ಯವಲ್ಲವೇ ಎಂದು ಸಂಗಾತಿ ಕೇಳುತ್ತದೆ.

## ಶುಭ ವಿವಾಹ

1. ಕುಶಾಲನಗರ ಹೋಬಳಿ ಹೊಸಪಟ್ಟಣ ಗ್ರಾಮದ ಕಳಂಜನ ಪೊನ್ನಪ್ಪನವರ ಪುತ್ರಿ **ಧನ್ಯಳಿಗೂ** ಮತ್ತು ಆಲೂರು ಸಿದ್ದಾಪುರದ ಕುಂಭಗೌಡನ ಸೋಮಯ್ಯನವರ ಪುತ್ರ **ಪೊನ್ನಪ್ಪನಿಗೂ** ದಿನಾಂಕ 18-4-2001ರಂದು ಕುಶಾಲನಗರದ ಕಾಳೇಘಾಟ್ ಕಲ್ಯಾಣ ಮಂಟಪದಲ್ಲಿ ವಿವಾಹ ಜರುಗಿತು.

2. ಅರ್‍ವತ್ತೋಕ್ಲು ಗ್ರಾಮದ ದಿ॥ ತುಂತಜ್ಜೀರ ಸೋಮಯ್ಯನವರ ಮಗಳು **ಲೀಲಾವತಿಗೂ** ಮತ್ತು ಕೊಟ್ಟೂರು ಗ್ರಾಮದ ಕೂಡಕಂಡಿ ಗಣಪತಿಯವರ ಪುತ್ರ **ಜಗನ್ನಾಥನಿಗೂ** ದಿನಾಂಕ 22-4-2001ರಂದು ಮಡಿಕೇರಿಯ ಗಣೇಶ ಕಲ್ಯಾಣ ಮಂಟಪದಲ್ಲಿ ವಿವಾಹವು ವಿಜೃಂಭಣೆಯಿಂದ ಜರುಗಿತು.

3. ಸಣ್ಣಪುಲಿಕೋಟು ಗ್ರಾಮದ ಹಾಲಿ ಬೆಂಗಳೂರು ನಿವಾಸಿ ಕುಂಡ್ಯನ ಐಯ್ಯಣ್ಣ (Air Force)ನವರ ಪುತ್ರ **ಪ್ರವೀಣಕುಮಾರನಿಗೂ** ಮತ್ತು ಬಲಮುರಿ ಗ್ರಾಮದ ಗುಡ್ಡೇರ ಸುಬ್ರಮಣ್ಯನವರ ಮಗಳು **ಮೃಣಾಲಿನಿಗೂ** ದಿನಾಂಕ 18-4-2001 ರಂದು ಮಡಿಕೇರಿಯ ಕೆಳಗಿನ ಗೌಡ ಸಮಾಜ ಕಲ್ಯಾಣ ಮಂಟಪದಲ್ಲಿ ವಿವಾಹವು ವಿಜೃಂಭಣೆಯಿಂದ ಜರುಗಿತು.

4. ಬೆಂಗಳೂರು ನಿವಾಸಿ ಚೊಟ್ಟೆಕೊರಿಯಂಡ ಬಾಲಕೃಷ್ಣ Retd. Dist. Session Judge, ಬೆಂಗಳೂರು ಇವರ ಮಗಳು **ಪಾಪ್ಪಿಗೂ** ಮತ್ತು ಕಲ್ಕತ್ತಾ ನಿವಾಸಿ ಲೆಫ್ಟಿನೆಂಟ್ ಕರ್ನಲ್ ಎಸ್. ಮುಖರ್ಜಿ ಇವರ ಪುತ್ರ ಕ್ಯಾಪ್ಟನ್ **ಕೌಶಿಕ್ ಮುಖರ್ಜಿಗೂ** ದಿನಾಂಕ 26-4-2001 ರಂದು ಬೆಂಗಳೂರಿನ ವುಡ್‌ಲ್ಯಾಂಡ್ ಹೋಟೆಲ್‌ನಲ್ಲಿ ವಿವಾಹ ನಡೆಯಿತು.

5. ಬಲ್ಲಮಾವಟಿ ಗ್ರಾಮದ ಶಂಕರನ ಗಣಪತಿಯವರ ಪುತ್ರ **ದೇವಯ್ಯನಿಗೂ** ಮತ್ತು ಕರಿಕೆ ಗ್ರಾಮದ ಹೊಸಮನೆ ಭರತ್‌ರವರ ಪುತ್ರಿ **ಶ್ಯಾಮಲಳಿಗೂ** ದಿನಾಂಕ 27-4-2001ರಂದು ಭಾಗಮಂಡಲದ ಗೌಡ ಸಮಾಜದಲ್ಲಿ ವಿವಾಹ ನಡೆಯಿತು.

6. ವಿರಾಜಪೇಟೆ ತಾಲ್ಲೂಕು ಕೆದಮುಳ್ಳೂರು ಗ್ರಾಮದ ಕೊರಿಯಾರ್ ಅಪ್ಪಣ್ಣನವರ ಮಗಳು **ಕವಿತಳಿಗೂ** ಮತ್ತು ಕರಿಕೆ ಬೇಕಲ್ ದಿ॥ ದಾಮೋದರ್‌ನವರ ಮಗ **ದೇವರಾಜ್** ಇವರ ಮದುವೆಯು ದಿನಾಂಕ 6-5-2001ರಂದು ವೀರಾಜಪೇಟೆ ಸಮೀಪವಿರುವ ಬಿಟ್ಟಂಗಾಲದ ಆರ್.ಕೆ. ಫಾರ್ಮ್‌ನಲ್ಲಿ ಬಹಳ ಗೌಜಿಯಾಗಿ ನಡೆಯಿತು.

7. ಮೈಸೂರು ನಿವಾಸಿ ಕೂಡಕಂಡಿರ ಗೋಪಾಲನವರ ಮಗ **ಅರುಣನಿಗೂ** ಮತ್ತು ಹಾಸನ ನಿವಾಸಿ ಬೈಲೋಳಿರ ದಿ॥ ಭೀಮಯ್ಯನವರ ಪುತ್ರಿ **ಆಶಾಳಿಗೂ** ದಿನಾಂಕ 9-5-2001ರಂದು ಮಡಿಕೇರಿಯಲ್ಲಿರುವ ಗಣೇಶ್ ಕಲ್ಯಾಣ ಮಂಟಪದಲ್ಲಿ ಮದುವೆಯು ಬಹು ವಿಜೃಂಭಣೆಯಿಂದ ನಡೆಯಿತು.

8. ಮೈಸೂರು ಸಿಟಿ ನಿವಾಸಿ ಚೆಟ್ಟಿಮಾಡ ಜನಾರ್ಧನನವರ ಮಗಳು **ಭಾರತಿಗೂ** ಮತ್ತು ಬೆಂಗಳೂರು ನಿವಾಸಿ ಪಿ. ಪದ್ಮನಾಭನ್‌ನವರ ಮಗ **ಪ್ರಮೋದ್**, ಬಿ.ಇ. Chem (Dubai) ಇವರಿಗೂ ದಿನಾಂಕ 7-5-2001ರಂದು ಬೆಂಗಳೂರಿನ ಹೋಟೆಲ್ ಕ್ಯಾಪಿಟಲ್‌ನಲ್ಲಿ ಬಹು ವಿಜೃಂಭಣೆಯಿಂದ ವಿವಾಹ ನಡೆಯಿತು.

**ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು**

# ಉಗ್ರಗಾಮಿಗಳ ಬಾಂಬ್ ಆಸ್ಫೋಟಕ್ಕೆ ಬಲಿಯಾದ ಕೊಡಗಿನ ವೀರಯೋಧ ಪ್ರಕಾಶ್ ಪಂಚಭೂತಗಳಲ್ಲಿ ಲೀನ

## ಮಡಿಕೇರಿ ನಗರದಲ್ಲಿ ಪಾರ್ಥೀವ ಶರೀರದ ಮೆರವಣಿಗೆ ಪೊಲೀಸ್ ಗೌರವಗಳೊಂದಿಗೆ ಹುತಾತ್ಮನ ಅಂತ್ಯಕ್ರಿಯೆ

ಮೇ ೧ ರಾಷ್ಟ್ರದ ಉತ್ತರದ ತುಟ್ಟತುದಿಯ ಗಡಿಭಾಗ ಕಾಶ್ಮೀರದ ಬೀರ್ವಾ ಎನ್ನುವ ಸ್ಥಳದಲ್ಲಿ ದುಷ್ಕರ್ಮಿಗಳ ಬಾಂಬ್ ಆಸ್ಫೋಟಕ್ಕೆ ಸಿಲುಕಿ ವೀರ ಮರಣವನ್ನಪ್ಪಿದ ಕೇಂದ್ರೀಯ ಮೀಸಲು ಪೊಲೀಸ್ ಪಡೆಯ ಯೋಧ, ಕೊಡಗಿನ ವೀರಪುತ್ರ ಆಮೆಮನೆ ಪ್ರಕಾಶ್ ಅವರ ಅಂತ್ಯಕ್ರಿಯೆ ಸಕಲ ಪೊಲೀಸ್ ಮರ್ಯಾದೆಗಳೊಂದಿಗೆ ಸ್ಥಳೀಯ ಕೊಡಗು ಗೌಡ ಜನಾಂಗದ ರುದ್ರಭೂಮಿಯಲ್ಲಿ ಇಂದು ಅಪರಾಹ್ನ ಪೂರೈಸುವುದರೊಂದಿಗೆ ಅವರು ಪಂಚಭೂತಗಳಲ್ಲಿ ಲೀನರಾಗಿ ಭೂತಕಾಲಕ್ಕೆ ಸೇರ್ಪಡೆಗೊಂಡರು.



ಯೋಧನ ಅಂತ್ಯಕ್ರಿಯೆ ಸಂದರ್ಭ ಉಸ್ತುವಾರಿ ಸಚಿವ ಎಂ. ಎಂ. ನಾಣಯ್ಯ ಅವರಿಂದ ಹುತಾತ್ಮನಿಗೆ ಅಂತಿಮ ಗೌರವ



ಜಿಲ್ಲಾ ಪೋಲಿಸ್‌ರಿಂದ ಹುತಾತ್ಮ ಯೋಧನಿಗೆ ಗೌರವ



ಕೇಂದ್ರ ಸಚಿವ ವಿ. ಧನಂಜಯ್‌ಕುಮಾರ್ ಅವರಿಂದ ಹುತಾತ್ಮ ಯೋಧ ಪ್ರಕಾಶ್‌ಗೆ ಅಂತಿಮ ನಮನ



ನಗರದ ಮುಖ್ಯ ಬೀದಿಯಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಿರುವ ದೃಶ್ಯ

ಕಾಶ್ಮೀರದ ಬಡಗಾಮ್ ಜಿಲ್ಲೆಯ ಬೀರ್ವಾ, ಉಗ್ರಗಾಮಿ ಸಂಘಟನೆಗಳ ಚಟುವಟಿಕೆಗಳ ಪ್ರಮುಖ ಸ್ಥಾನ. 29-4-2001ರ ಆದಿತ್ಯವಾರದಂದು ಶ್ರೀನಗರದಿಂದ ಪೊಲೀಸ್ ಟ್ರಕ್ ಒಂದರಲ್ಲಿ ಆಮೆಮನೆ ಪ್ರಕಾಶ್ ಸೇರಿದಂತೆ 12 ಮಂದಿ ಕೇಂದ್ರೀಯ ಮೀಸಲು ಪೊಲೀಸ್ ಪಡೆಯ ಸಿಬ್ಬಂದಿಗಳು ಸುಮಾರು ೨೦ ಕಿಲೋ ಮೀಟರ್ ದೂರದ ಬೀರ್ವಾ ಗ್ರಾಮದತ್ತ ತೆರಳುತ್ತಿದ್ದರು. ತೆರಳುವ ಹಾದಿಯಲ್ಲೇ ನೆಲದಾಳದಲ್ಲಿ ದುಷ್ಕರ್ಮಿಗಳು ಹುಗಿದಿಟ್ಟ ಬಾಂಬ್, ಟ್ರಕ್ ಅದರ ಮೇಲೆ ಹಾದು ಹೋಗುತ್ತಿದ್ದಂತೆಯೇ ಆಸ್ಫೋಟಿಸಿತು. ಫಲಸ್ವರೂಪ ಕೇಂದ್ರೀಯ ಮೀಸಲು ಪೊಲೀಸ್ ಪಡೆಯ ಟ್ರಕ್ ನುಚ್ಚುನೂರಾಗಿ, ಅದರಲ್ಲಿದ್ದ ಆರು ಮಂದಿ ಸ್ಥಳದಲ್ಲೇ ಕೊನೆಯುಸಿರೆಳೆದಿದ್ದರು. ಅವರಲ್ಲಿ ಆಮೆಮನೆ ಪ್ರಕಾಶ್ ಅವರೂ ಒಬ್ಬರು. ರಾಷ್ಟ್ರ ರಕ್ಷಣೆಯ ದೃಢ ಸಂಕಲ್ಪದಲ್ಲಿ ಮುನ್ನುಗ್ಗುತ್ತಿದ್ದ ಅವರು, ದುರ್ಘಟನೆಯಲ್ಲಿ ಭಾರತ ಮಾತೆಗೆ ರಕ್ತತರ್ಪಣ ನೀಡಿದ್ದಾರೆ.

ವೀರಯೋಧ ಆಮೆಮನೆ ಪ್ರಕಾಶ್ ಅವರ ಪಾರ್ಥೀವ



ದುಃಖ ತಪ್ತ ತಾಯಿ ಮತ್ತು
ಯೋಧನ ಅಂತಿಮ ದರ್ಶನಕ್ಕೆ ಕಿಕ್ಕಿರಿದ ಸಾರ್ವಜನಿಕರು



ಹುತಾತ್ಮ ವೀರ ಯೋಧ ಆಮೆಮನೆ ಪ್ರಕಾಶ್ ಅವರ
ಪಾರ್ಥಿವ ಶರೀರವನ್ನು ರುದ್ರಭೂಮಿಯತ್ತ ತರುತ್ತಿರುವುದು

ಶರೀರವನ್ನು ವಿಮಾನದಲ್ಲಿ ಶ್ರೀನಗರ-ನವದೆಹಲಿ ಮಾರ್ಗವಾಗಿ ಬೆಂಗಳೂರಿಗೆ 30-4-2001 ರಾತ್ರಿ ೭.೩೦ಕ್ಕೆ ಅವರ ಸಹೋದ್ಯೋಗಿ ಹವಾಲ್ದಾರ್ ಕೆ. ಕೆ. ರಾಮದಾಸ್ ಅವರ ಉಸ್ತುವಾರಿಯಲ್ಲಿ ತರಲಾಯಿತು. ಬೆಂಗಳೂರಿನ ಕೇಂದ್ರೀಯ ಮೀಸಲು ಪಡೆಯ ಗ್ರೂಪ್ ಸೆಂಟರ್‌ನಲ್ಲಿ ಉಪನಿರೀಕ್ಷಕ ಚೆಂಗಪ್ಪ ಹಾಗೂ ಸಿಬ್ಬಂದಿಗಳು ಪಾರ್ಥಿವ ಶರೀರವನ್ನು ಸಕಲ ಗೌರವಗಳೊಂದಿಗೆ ಬರಮಾಡಿಕೊಂಡರು. ಮೇ 1ರಂದು ಮುಂಜಾನೆ ಬೆಂಗಳೂರಿನಿಂದ ಮೃತ ದೇಹವನ್ನು ಮಡಿಕೇರಿಯ ಗೌಳಿಬೀದಿಯ ಅವರ ಸ್ವಗೃಹಕ್ಕೆ ತರಲಾಯಿತು.

ಮೂಲತಃ ತಾವೂರು ನಿವಾಸಿಯಾಗಿರುವ ಆಮೆಮನೆ ಪ್ರಕಾಶ್, ಜನಿಸಿ 3 ತಿಂಗಳಲ್ಲೇ ತಂದೆಯನ್ನು ಕಳೆದುಕೊಂಡರು. ತಾಯಿ ಪಾರ್ವತಿ ಅವರು ಆರೋಗ್ಯ ಇಲಾಖೆಗೆ ಸೇರ್ಪಡೆಗೊಂಡು ಮಡಿಕೇರಿಯಲ್ಲೇ ನೆಲೆಸಿದ್ದಾರೆ. ಕಳೆದ ೬ ವರ್ಷಗಳ ಹಿಂದೆ ಸಿಆರ್‌ಪಿಎಫ್‌ಗೆ ಸೇರಿದ ಪ್ರಕಾಶ್, ೧೨೨ನೇ ಬೆಟಾಲಿಯನ್ 'ಎಫ್' ಕಂಪೆನಿಯ ಧೈರ್ಯವಂತ ಯೋಧ. ಕಳೆದ ಹಲ ಸಮಯಗಳ ಹಿಂದೆ ನಡೆದ ಕಾರ್ಯಾಚರಣೆಗಳಲ್ಲಿ ಹಲ ಉಗ್ರಗಾಮಿಗಳ ಹುಟ್ಟಡಗಿಸಿ, ಸಾಹಸ ಪ್ರದರ್ಶಿಸಿದ್ದರಲ್ಲದೇ ಚಿನ್ನದ ಪದಕವನ್ನೂ ಪಡೆದು ಜಿಲ್ಲೆಗೆ ಆ ಮೂಲಕ ರಾಷ್ಟ್ರಕ್ಕೆ



ಶಾಸಕ ಅಪ್ಪಚ್ಚು ರಂಜನ್ ಅವರಿಂದ ದುಃಖತಪ್ತ
ತಾಯಿ ಪಾರ್ವತಿಯವರಿಗೆ ಸಾಂತ್ವನ

ಕೀರ್ತಿ ತಂದಿದ್ದರು. ಮೂರು ಬಾರಿ ಇವರು ಉಗ್ರಗಾಮಿಗಳ ಗುಂಡಿನಿಂದ ಕೂದಲೆಳೆಯ ಅಂತರದಲ್ಲಿ ಪಾರಾಗಿದ್ದರು. ತಿಂಗಳ ಹಿಂದೆಯಷ್ಟೇ ರಜೆಯ ನಿಮಿತ್ತ ಮಡಿಕೇರಿಗೆ ಬಂದು ತಾಯಿ ಹಾಗೂ ಬಂಧು ಬಳಗದೊಂದಿಗೆ ಆತ್ಮೀಯವಾಗಿ ದಿನಗಳನ್ನು ಕಳೆದು ಹಿಂತೆರಳಿದ ಪ್ರಕಾಶ್ ಮತ್ತೆಂದಿಗೂ ತಾಯಿ ಭಾರತಾಂಬೆಯ ಅಡಿದಾವರೆಗಳಲ್ಲಿ ಲೀನವಾಗಿದ್ದಾರೆ. ತಮ್ಮೊಂದಿಗೇ ಒಡನಾಡಿಕೊಂಡು ಆತ್ಮೀಯನಾಗಿದ್ದ ಸ್ನೇಹಿತ, ಬಂಧು ಎಲ್ಲವೂ ಆಗಿದ್ದ ಪ್ರಕಾಶ್ ಇನ್ನಿಲ್ಲವಾಗಿರುವ ದುಃಖವನ್ನು ಭರಿಸಲಾಗದ ನೂರಾರು ಮಂದಿ ಇಂದು ಗೌಳಿಬೀದಿಯಲ್ಲಿ ಮುಂಜಾನೆಯಿಂದಲೇ ಕಿಕ್ಕಿರಿದು ನೆರೆದು, ಪ್ರಕಾಶನ ಪಾರ್ಥೀವ ಶರೀರದ ಬರವಿಗಾಗಿ ಕಾದಿದ್ದರು.

ಬೆಂಗಳೂರು ಕೇಂದ್ರೀಯ ಮೀಸಲು ಪಡೆಯ ಉಪನಿರೀಕ್ಷಕ ಚೆಂಗಪ್ಪ ಹಾಗೂ ಇತರ ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಟ್ರಕ್ ಒಂದರಲ್ಲಿ ಹುತಾತ್ಮ ಯೋಧ ಪ್ರಕಾಶ್‌ರ ಪಾರ್ಥೀವ ಶರೀರವನ್ನು ಗೌಳಿಬೀದಿಯ ಮನೆಗೆ ತಂದಾಗ ಅಲ್ಲಿವರೆಗೆ ಮೌನದ ಮುಸುಕಿನಲ್ಲಿ ಹೆಪ್ಪುಗಟ್ಟಿದ್ದ ವಾತಾವರಣ ಒಮ್ಮೆಲೆ ಬಿರಿದು ಶೋಕಭರಿತ, ದುಃಖದ ಛಾಯೆ ಕವಿದುಕೊಂಡಿತು. ಪುತ್ರ ಶೋಕವನ್ನು ತಾಳಲಾಗದ ತಾಯಿ ಪಾರ್ವತಿ ಮೂರ್ಛೆಗೊಳಗಾದರು. ಪಾರ್ಥೀವ ಶರೀರವನ್ನು ಸಾರ್ವಜನಿಕ ವೀಕ್ಷಣೆಗಾಗಿ ಗೌಳಿಬೀದಿಯ ಚೆರಿಯಮನೆ ಪೊನ್ನಪ್ಪ ಆಟದ ಮೈದಾನದಲ್ಲಿ ಇಡಲಾಯಿತು. ಮಡಿಕೇರಿಯ ನೂರಾರು ಸಾರ್ವಜನಿಕರು ಯೋಧನ ಅಂತಿಮ ದರ್ಶನ ಪಡೆದು ಗೌರವ ಸಲ್ಲಿಸಿದರು.

ಜಿಲ್ಲಾ ಉಸ್ತುವಾರಿ ಸಚಿವರಾದ ಎಂ.ಎಂ. ನಾಣಯ್ಯ ಅವರು ಯೋಧನ ಅಂತಿಮ ದರ್ಶನ ಪಡೆದು ತಾಯಿ ಪಾರ್ವತಿ ಅವರಿಗೆ ಸಾಂತ್ವನ ನುಡಿದರು. ಮಾಜಿ ಸಚಿವ ಎಂ. ಸಿ. ನಾಣಯ್ಯ, ಶಾಸಕ ಅಪ್ಪಚ್ಚುರಂಜನ್, ಮಾಜಿ ಶಾಸಕ ಡಿ. ಎಸ್. ಮಾದಪ್ಪ ಅವರುಗಳು ಪಾರ್ಥೀವ ಶರೀರಕ್ಕೆ ಹೂಗುಚ್ಛವಿರಿಸಿ ಅಂತಿಮ ಗೌರವ ಸಲ್ಲಿಸಿದರು. ಜಿಲ್ಲಾಧಿಕಾರಿ ಎಂ. ವಿ. ಜಯಂತಿ, ಜಿಲ್ಲಾ

20ನೇ ಪುಟಕ್ಕೆ

ವಾಸ್ತು ಕೆಟ್ಟ ವಾಯವ್ಯದ - ನಿರ್ಮಾಣ - ದಿವಾಳಿಯೆಡೆಗೆ ಪಯಣ

# ಕಿರು ಪರಿಚಯ : ಅಮೆಮನೆ ಪ್ರಕಾಶ್

ಭಾಗಮಂಡಲ ಸಮೀಪ ತಾವೂರು ಗ್ರಾಮದ ಆಮೆಮನೆ ಅಪ್ಪಾಜಿಯವರು ಮಡಿಕೇರಿ ಸರ್ಕಾರಿ ಆಸ್ಪತ್ರೆಯಲ್ಲಿ ಎಕ್ಸ್‌ರೆ ಡಿಪಾರ್ಟ್‌ಮೆಂಟಿನಲ್ಲಿ ಕೆಲಸಕ್ಕಿದ್ದು 1970ರಲ್ಲಿ ತೀರಿಕೊಂಡಿದ್ದರು. ಆಗಿನ್ನು ಪ್ರಕಾಶನಿಗೆ ಕೇವಲ 3 ತಿಂಗಳು ಅಷ್ಟೆ. ತಂದೆಯ ಮರಣಾಂತರ ತಾಯಿ ಪಾರ್ವತಿಗೆ ಆರೋಗ್ಯ ಇಲಾಖೆಯಲ್ಲಿ ಗ್ರೂಪ್ 'ಡಿ' ನೌಕರಿ ಹುದ್ದೆಯು ಲಭಿಸಿತ್ತು. ತಾಯಿ ಪಾರ್ವತಿ ಕಾರುಗುಂದ ಗ್ರಾಮದ ಮುಕ್ಕಾಟಿ ಪೂವಯ್ಯನವರ 6 ಗಂಡು, 4 ಹೆಣ್ಣು ಮಕ್ಕಳಲ್ಲಿ 2ನೇ ಮಗಳಾಗಿದ್ದರು. ಇವರ ಮದುವೆಯು 1967ರಲ್ಲಿ ನಡೆಯಿತು. ಬಡತನದಲ್ಲಿ ಬಸವಳಿಯುತ್ತಿದ್ದ ಇವರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯೆಂದರೆ ಕೇವಲ ಒಂದು ಎಕ್ರೆ ಭೂಮಿ ಮಾತ್ರ.

ದಿನಾಂಕ 22-5-1970ರಲ್ಲಿ ಪ್ರಕಾಶನ ಜನನವಾಯಿತು. ಕಷ್ಟ ಪರಂಪರೆಯನ್ನು ಅನುಭವಿಸುತ್ತಾ; ಹೆತ್ತ ಏಕೈಕ ಕುಡಿಯನ್ನು ಏನೊಂದು ಕೊರತೆ ಇಲ್ಲದೆ ಸಾಕಿ ಸಲಹಿದ ಪಾರ್ವತಿಯವರ ಜೀವನ ಇಂದು ಶೂನ್ಯ. 1 ರಿಂದ 10ನೇ ತರಗತಿ ತನಕ ಮಡಿಕೇರಿ ಸೈಂಟ್ ಮೈಕಲ್ ಶಾಲೆಯಲ್ಲಿ ಓದುವಿಕೆ, I, II P.U.C. ಅನ್ನು ಮೈಸೂರಿನ ಮರಿಮಲ್ಲಪ್ಪ ಕಾಲೇಜಿನಲ್ಲಿ ಓದು ಮುಂದುವರಿಕೆ, ನಂತರ ಮೈಸೂರಿನ I.T.I. ಯೊಂದರಿಂದ ಇಲಾಟ್ರೊನಿಕ್ಸ್ ವಿಷಯದಲ್ಲಿ ತರಬೇತಿ. 13-9-1991ರಲ್ಲಿ CRPFನ F/122 ಬೆಟಾಲಿಗೆ ಸೇರ್ಪಡೆ. ಸಿಗ್ನಲ್ ವೈರ್‌ಲೆಸ್ ವಿಭಾಗದಲ್ಲಿ ಕಾನ್‌ಸ್ಟೇಬಲ್, ಪರೀಕ್ಷೆಗೆ ಕಟ್ಟಿ ಬಡ್ತಿ ಹೊಂದುವ ಸಂದರ್ಭದಲ್ಲಿ ವೀರೋಚಿತ ಮರಣ.

ಕೇರಳದ ಪಳ್ಳಿಪುರಂ, ಗುಜರಾತ್‌ನ ಗಾಂಧಿನಗರ, ತ್ರಿಪುರದಲ್ಲಿ ಸೇವೆ, ಉತ್ತರದ ಪಂಜಾಬು, ಅಮೃತಸರ, ಕಾಶ್ಮೀರ ಕಣಿವೆ, ಕಾರ್ಗಿಲ್ ಯುದ್ಧ ಸಮಯದಲ್ಲಿ ಕಾರ್ಯಮಗ್ನ. ಜೊತೆಗೆ ಕಾರ್ಗಿಲ್ ಸಮರಕ್ಕಾಗಿ ತನ್ನ ಬ್ಯಾಟಾಲಿಯನ್ನಿಂದ ಚಿನ್ನದ ಪದಕವನ್ನು ಸಹ ಪಡೆದಿದ್ದ.

**ಮುಂದಿನ ತಿಂಗಳು ವಿವಾಹವಾಗಲಿದ್ದ ಪ್ರಕಾಶ್ - ಆದರೆ !**

ಇದಂತೂ ದುರಂತವೇ ಸರಿ. ಶ್ರೀನಗರದ ಗಡಿಯಲ್ಲಿ ಉಗ್ರಗಾಮಿಗಳ ಬಾಂಬ್ ಧಾಳಿಗೆ ಬಲಿಯಾದ ಕೊಡಗಿನ ವೀರ ಯೋಧ ಎ. ಎ. ಪ್ರಕಾಶ್ ಅವರು ಮುಂದಿನ ತಿಂಗಳು ವಿವಾಹವಾಗಲಿದ್ದರು. ಆದರೆ ದುರಾದೃಷ್ಟವಶಾತ್ ಕಂಕಣ ಭಾಗ್ಯ ಕಾಣದೆ ಇನ್ನಿಲ್ಲವಾಗಿದ್ದಾರೆ.

ಕಳೆದ ಎರಡು ತಿಂಗಳ ಹಿಂದೆ ರಜೆಯಲ್ಲಿ ಆಗಮಿಸಿದ್ದ ಪ್ರಕಾಶ್, ತಾಯಿಯೊಂದಿಗೆ ಯುವತಿಯನ್ನು ನೋಡಿ, ಒಪ್ಪಿಗೆ ಸೂಚಿಸಿದ್ದರು. ಇದರಂತೆ ಮುಂದಿನ ತಿಂಗಳು ಕೊಡಗಿಗೆ ಆಗಮಿಸಿ ನಿಶ್ಚಿತಾರ್ಥ ಮುಗಿಸಿಕೊಂಡು, ಅದೇ ತಿಂಗಳು ವಿವಾಹವಾಗಲಿದ್ದರು.

ಕಳೆದ ಎರಡು ದಿನಗಳ ಹಿಂದೆ ಅವರು ದೂರವಾಣಿ ಮೂಲಕ ಮಾತನಾಡಿ, ತಾನು ೪೦ ಕಿ. ಮೀ. ದೂರದಷ್ಟು ಕರ್ತವ್ಯಕ್ಕೆ ತೆರಳಿದ್ದು ಇನ್ನು ಕೆಲವು ದಿವಸ ಫೋನ್ ಮಾಡಲು ಸಾಧ್ಯವಿಲ್ಲವೆಂದೂ, ಆತಂಕ ಪಡುವ ಅಗತ್ಯವಿಲ್ಲವೆಂದು ಹೇಳಿದ್ದರು. ಇದೀಗ ಶಾಶ್ವತವಾಗಿ ದೂರವಾಗಿ ಫೋನ್ ಮಾಡದಂತಾಗಿದ್ದಾರೆ. ಪ್ರಕೃತಿಯ ಏರುಪೇರುಗಳು ಎಂತಹ ವಿಪರ್ಯಾಸ.

ಪಾರ್ಥಿವ ಶರೀರದ ಅಂತ್ಯಕ್ರಿಯೆಯಲ್ಲಿ 10 ಸಾವಿರಕ್ಕಿಂತಲೂ ಹೆಚ್ಚಿನ ಜನರು ಭಾಗವಹಿಸಿ ತಮ್ಮ ಕಂಬನಿ ತುಂಬಿದ ಕಣ್ಣುಗಳಿಂದ ದೇಶಕ್ಕಾಗಿ ಬಲಿದಾನಗೈದ ವೀರ ಯೋಧನನ್ನು ಬೀಳ್ಕೊಟ್ಟರು. ಚೆರಿಯ ಮನೆ ಪೊನ್ನಪ್ಪನವರ ಆಟದ ಮೈದಾನದಿಂದ ಹೊರಟು, ಟೋಲ್‌ಗೇಟ್, ಮುಖ್ಯ ಬೀದಿ, ಬಸ್ ನಿಲ್ದಾಣ, ಚೌಕಿ, ವೆಬ್ಸ್‌ಗಾಗಿ ಸ್ಟುವರ್ಟು ಹಿಲ್‌ನಲ್ಲಿರುವ ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದ ರುದ್ರ ಭೂಮಿಯಲ್ಲಿ ಅಗ್ನಿಸ್ಪರ್ಶದೊಂದಿಗೆ ಮಧ್ಯಂತರ ಜಗತ್ತಿಗೆ ಪ್ರವೇಶಿಸಿ ಪಂಚಭೂತಗಳಲ್ಲಿ ಲೀನವಾದರು.

1837ರ ಅಮರ ಸುಳ್ಯದ ಕ್ರಾಂತಿಯ ನಂತರ ಗೌಡ ಜನಾಂಗ ಕಂಡ ವೀರಯೋಧ. ಶ್ರೀಯುತರ ಅಕಾಲ ಮರಣಕ್ಕೆ ಕೊಡಗು ಸಂಗಾತಿ ಮತ್ತು ಸಮಸ್ತ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನಾಂಗದ ಪರವಾಗಿ ತನ್ನ ಅಶ್ರುತರ್ಪಣೆಯನ್ನು ಗೈಯ್ಯುತ್ತಿದೆ ಹಾಗೂ ಮೃತರ ಆತ್ಮಕ್ಕೆ ಶಾಂತಿಯನ್ನು ಬಯಸುತ್ತದೆ.

ಗೌಡ ಜನಾಂಗದ ಕೀರ್ತಿ ಪತಾಕೆಯ ಚರಿತ್ರೆಯಲ್ಲಿ ಅಮರವಾಗಿ ಉಳಿಯುವಂತಾಗಲು 1837ರ ವೀರಕೇಸರಿ ಗುಡ್ಡೆಮನೆ ಅಪ್ಪಯ್ಯಗೌಡರ, ನಿಡ್ಯಮಲೆ ಮುದ್ದಪ್ಪನವರ ಆಮೆಮನೆ ಪ್ರಕಾಶ್‌ರಂತಹ ಮಹಾನ್ ವ್ಯಕ್ತಿಗಳ ಎದೆ ಮಟ್ಟದ ಕಂಚಿನ ಪ್ರತಿಮೆಗಳನ್ನು ನಿರ್ಮಿಸಿ ಮುಂದಿನ ಜನಾಂಗಕ್ಕೆ ತಿಳಿಯ ಪಡಿಸುವುದು ಜನಾಂಗದ ಸಂಘ ಸಂಸ್ಥೆಗಳು ಮತ್ತು ಸರ್ಕಾರದ ಕರ್ತವ್ಯವಾಗಿದೆ. ಈ ನಿಟ್ಟಿನಲ್ಲಿ ನಿದ್ದೆಗಣ್ಣಿನಲ್ಲಿರುವ ಗೌಡ ಸಮಾಜಗಳು ಇನ್ನಾದರು ಎಚ್ಚೆತ್ತು ಕಾರ್ಯ ಪ್ರವೃತ್ತರಾಗುವರೋ? ಕಾದು ನೋಡೋಣಾ ಅಲ್ಲವೇ?

**- ಪಟ್ಟಡ ಪ್ರಭಾಕರ**

## ನಿಧನ

ಪಾರಣೆ ಕಿರುಂದಾಡು ಗ್ರಾಮದ ಬಿಟ್ರ ದಿII ಅಚ್ಚಯ್ಯನವರ ಪತ್ನಿ ಮುತ್ತಪ್ಪನವರು ದಿನಾಂಕ 26-4-2001ರಲ್ಲಿ ತಮ್ಮ ಸ್ವಗೃಹದಲ್ಲಿ ನಿಧನರಾದರು. ಇವರಿಗೆ 74 ವರ್ಷ ಪ್ರಾಯವಾಗಿತ್ತು. ಇವರು ಮಡಿಕೇರಿ ನಿವಾಸಿ ಕೌನ್ಸಿಲರ್ ಬಿಟ್ರ ರಾಮಯ್ಯನವರ ತಾಯಿಯಾಗಿದ್ದು ನಾಲ್ಕು ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳನ್ನು ಅಲ್ಲದೆ ಅಪಾರ ಬಂಧು ವರ್ಗದವರನ್ನು ಅಗಲಿದ್ದಾರೆ.

**- ಸಂಗಾತಿ**

# ಆನಂದ್ ಕೊಡಗು ಮತ್ತು ಅಂಚೆಮನೆ ಸುಧಿಗೆ ದಿ|| ಚಂದ್ರಶೇಖರ್ ಪ್ರಶಸ್ತಿ



ಸತತ ಎರಡನೇ ವರ್ಷವೂ 'ಆಂದೋಲನ' ವರದಿಗೆ ಜಿಲ್ಲಾ ಪತ್ರಕರ್ತರ ಸಂಘದ ಆಶ್ರಯದಲ್ಲಿ ನೀಡಲಾಗುವ ದಿ. ಬಿ. ವಿ. ಚಂದ್ರಶೇಖರ್ ಪ್ರಶಸ್ತಿಗೆ 'ಆಂದೋಲನ' ಕೊಡಗು ಆವೃತ್ತಿಯ ವರದಿಗಾರರಾದ ಆನಂದ್ ಕೊಡಗು ಹಾಗೂ ಅಂಚೆಮನೆ ಸುಧಿ ಅವರು ಭಾಜನರಾಗಿದ್ದಾರೆ.

ಮಾನವೀಯ ಮೌಲ್ಯಗಳಿಗೆ ಒತ್ತು ನೀಡುವ ಅತ್ಯುತ್ತಮ ಗ್ರಾಮೀಣ ವರದಿಗೆ ಪ್ರಶಸ್ತಿ ನೀಡಲು ಕೋವರ್‌ಕೊಲ್ಲಿ ಇಂದ್ರೇಶ್ ಅವರು ತಮ್ಮ ತಂದೆ ದಿ. ಬಿ. ವಿ. ಚಂದ್ರಶೇಖರ್ ಅವರ ಹೆಸರಿನಲ್ಲಿ ದತ್ತಿ ನಿಧಿಯೊಂದನ್ನು ಎರಡು ವರ್ಷಗಳ ಹಿಂದೆ ಸ್ಥಾಪಿಸಿದ್ದರು. ೨೦೦೦-೦೧ನೇ ಸಾಲಿನ ಈ ಬಾರಿಯ ಪ್ರಶಸ್ತಿಯು, ಪ್ರಸಕ್ತ ಸಾಲಿನ ಫೆಬ್ರವರಿ ೨೬ರಂದು 'ಆಂದೋಲನ' ಕೊಡಗು ಆವೃತ್ತಿಯಲ್ಲಿ ಜಿಲ್ಲಾ ವರದಿಗಾರರಾದ ಆನಂದ್ ಕೊಡಗು ಹಾಗೂ ಅಂಚೆಮನೆ ಸುಧಿ ಅವರುಗಳು ಬರೆದ ಜನಪ್ರತಿನಿಧಿಗಳಿಗೆ ಬೇಡವಾದ ಚೆನ್ನಂಗಿಯ ಗಿರಿಜನ ಆಶ್ರಮ ಶಾಲೆ ಎಂಬ ಅತ್ಯುತ್ತಮ ವರದಿಯ ಪಾಲಾಗಿದೆ.

ಮಾಲ್ದಾರೆ ಸಮೀಪದ ಕುಗ್ರಾಮವಾದ ಚೆನ್ನಂಗಿಯಲ್ಲಿನ ಆಶ್ರಮ ಶಾಲೆಯ ದುಸ್ಥಿತಿ, ಅಲ್ಲಿನ ಮಕ್ಕಳ ಶೋಚನೀಯ ಪರಿಸ್ಥಿತಿಯ ಕುರಿತು ಮನಮಿಡಿಯುವ ಅಂಶಗಳನ್ನು ಈ ವರದಿ ಒಳಗೊಂಡಿದ್ದು, ಇದನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗಿತ್ತು.

ದಿ. ಚಂದ್ರಶೇಖರ್ ಪತ್ರಿಕೋದ್ಯಮ ಪ್ರಶಸ್ತಿಯನ್ನು ಆರಂಭಿಸಿದ ಮೊದಲ ವರ್ಷವೇ 'ಆಂದೋಲನ' ಕೊಡಗು ಆವೃತ್ತಿಯ ವರದಿಗಾರರಾದ ಐತಿಚಂಡ ರಮೇಶ್ ಉತ್ತಪ್ಪ ಅವರು ಬರೆದ ಕಾಲೂರಿನ ಕುರಿತ ಮಾನವೀಯ ಮೌಲ್ಯಗಳನ್ನೊಳಗೊಂಡ ವರದಿಗೆ ಈ ಪ್ರಶಸ್ತಿ ಲಭ್ಯವಾದುದನ್ನು ಇಲ್ಲಿ ಸ್ಮರಿಸಬಹುದು.

ಪ್ರಸಕ್ತ ಸಾಲಿನ ತೀರ್ಪುಗಾರರಾದ ಕೊಡಗು ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಧರ್ ಮೂರ್ತಿ, ಸರಕಾರಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ರೇಖಾಕಾಳಯ್ಯ ಹಾಗೂ ಡಾ. ನಡಿಬೈಲು ಉದಯಶಂಕರ್ ಅವರುಗಳು ಪ್ರಶಸ್ತಿಗೆ ಆನಂದ್ ಕೊಡಗು ಹಾಗೂ ಅಂಚೆಮನೆ ಸುಧಿ ಅವರ ವರದಿಯನ್ನು ಆಯ್ಕೆ ಮಾಡಿದ್ದಾರೆ.

ಪ್ರಶಸ್ತಿಗಾಗಿ ಈ ಸಾಲಿನಲ್ಲಿ ೧೧ ಮಂದಿ ವರದಿಗಾರರಿಂದ ಕನ್ನಡ ಭಾಷೆಯಲ್ಲಿ ೧೭, ಆಂಗ್ಲ ಭಾಷೆಯಲ್ಲಿ ೧೯ ಹಾಗೂ ಕೊಡವ ಭಾಷೆಯಲ್ಲಿ ೩ ವರದಿಗಳು ಪರಿಶೀಲನೆಗೆ ಬಂದಿದ್ದವು. ವಿಜೇತರಿಗೆ ಮೇ 1ರಂದು 'ಪ್ರೆಸ್ ಕ್ಲಬ್'ನಲ್ಲಿ ನಡೆಯುವ ಸಂಘದ ವಾರ್ಷಿಕ ಮಹಾಸಭೆಯಲ್ಲಿ ಪ್ರಶಸ್ತಿ ಪ್ರಧಾನ ಮಾಡಲಾಗಿದೆ.

### ಅಂಚೆಮನೆ ಸುಧಿ : ಕಿರು ಪರಿಚಯ



ಅಂಚೆಮನೆ ದಿ|| ನಂಜುಂಡ ಮತ್ತು ಜಯಮ್ಮ ದಂಪತಿಗಳ ಏಕ ಮಾತ್ರ ಪುತ್ರನಾಗಿ ಸುಧಿಯ ಜನನ 1973ರಲ್ಲಿ ಆಯಿತು. ಇವರ ವಿದ್ಯಾಭ್ಯಾಸ ಸಿದ್ದಾಪುರ, ಮಡಿಕೇರಿ ಮತ್ತು ಸುಳ್ಯದಲ್ಲಿ ನಡೆಯಿತು.

1991ರಲ್ಲಿ ರಾಜಕೀಯಕ್ಕೆ ಇವರ ಪ್ರವೇಶವಾಯ್ತು. ಹಾಗೂ ಜನಸೇವೆ ಮಾಡುವಲ್ಲಿ ಯಶಸ್ವಿಯಾದರು. 1993ರಲ್ಲಿ ಗಡಿನಾಡು ಸಂಚಾರಿ ಪತ್ರಿಕೆಯ ಸಂಪಾದಕರಾದ ಶ್ರೀ ಟಿ. ಪಿ. ರಮೇಶ್‌ನವರ ಮೂಲಕ ಪತ್ರಿಕಾ ರಂಗ ಪ್ರವೇಶಿಸಿದರು. 1994ರಲ್ಲಿ ಐತಿಚಂಡ ರಮೇಶ್‌ನವರ ಸ್ನೇಹದಿಂದ ಆಂದೋಲನ ಪತ್ರಿಕೆಯ ವರದಿಗಾರರಾಗಿ ಜನರ ಸಮಸ್ಯೆಯ ಬಗ್ಗೆ ವರದಿ ಮಾಡುವಲ್ಲಿ ಸಫಲರಾದರು.

1996ರಿಂದ 1998ರ ತನಕ ಸೋಮವಾರಪೇಟೆ ತಾಲ್ಲೂಕಿನ ಬಿಜೆಪಿಯ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. 1998-1999ರಲ್ಲಿ ಕೊಡಗು ಜಿಲ್ಲೆಯ ಯುವ ಮೋರ್ಚದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಣೆ. 1995ರಲ್ಲಿ ಅಭ್ಯತ್ ಮಂಗಲದ ಅಂಗನವಾಡಿ ಸಲಹಾ ಸಮಿತಿ ಅಧ್ಯಕ್ಷರಾಗಿ ದುಡಿದಿದ್ದಾರೆ. 1995ರಿಂದ 2 ಬಾರಿ ನೆಲ್ಲಿಹುದಿಕೇರಿ VSSN Bankನ ನಿರ್ದೇಶಕರಾಗಿಯು ಮತ್ತು ಅಭ್ಯತಮಂಗಲ ಸರಕಾರಿ ಪ್ರಾಥಮಿಕ ಶಾಲೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. 1997ರಿಂದ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ (ರಿ) ಮಡಿಕೇರಿಯ ನಿರ್ದೇಶಕರಾಗಿಯೂ, 1999ರಿಂದ ಕೊಡಗು ಸಣ್ಣ ಕಾಫಿ ಬೆಳೆಗಾರರ ಸಂಘ ಸಿದ್ದಾಪುರ ಇದರ ನಿರ್ದೇಶಕರಾಗಿಯೂ, 1997ರಿಂದ ಸೋಷಿಯಲ್ ವರ್ಕ್ಸ್ ಆಫ್ ಡೆಕ್ಕನ್ (ರಿ) ಫಿಲಂ ಸ್ಟೋರಿ, ಮೈಸೂರು ಇದರ ನಿರ್ದೇಶಕರಾಗಿಯೂ, 1999ರಿಂದ ಕೊಡಗು ಜಿಲ್ಲಾ ಭಾರತೀಯ ಮಜ್ದೂರ್ ಸಂಘದ ಉಪಾಧ್ಯಕ್ಷರಾಗಿಯೂ, 1999ರಿಂದ ಕೊಡಗು ಜಿಲ್ಲಾ ಕಾರ್ಮಿಕರ ಸಂಘದ ಕಾರ್ಯದರ್ಶಿಯಾಗಿಯೂ, 2000 ದಿಂದ ವಾಲ್ನೂರು

7ನೇ ಪುಟಕ್ಕೆ

# ಹೊರಳು ದಾರಿಯತ್ತ...... ಗೌಡ ಮಹಿಳೆ

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಆಳರಸರ ನೇರ ಆಳ್ವಿಕೆಗೆ ಒಳಗಾಗಿದ್ದ ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳು ಸ್ವಾತಂತ್ರ್ಯಾನಂತರ ಹಲವು ಹೊಸ ಆಂದೋಲನಗಳ ಬಿರುಗಾಳಿ ಬೀಸಿದ ಕಾರಣವಾಗಿ, ಆಂಗ್ಲರ ನಿರ್ಗಮನದೊಡನೆಯೇ ತನ್ನ ವಸಾಹತು ಸಂಸ್ಕೃತಿಯ ಪೊರೆಯನ್ನು ಕಳಚಿಕೊಳ್ಳುತ್ತಾ ಕ್ರಮೇಣ ಹೊಸತನದತ್ತ ಸಾಗಿದುವು. ಈ ನವಮನ್ವಂತರದ ನವಸಮಾಜದ ನಿರ್ಮಾಣ ಕಾರ್ಯದಲ್ಲಿ ಸಹಜವಾಗಿಯೇ ಈ ಜಿಲ್ಲೆಗಳ ಗೌಡ ಸಮಾಜದ ಅರ್ಧ ಅಂಗವಾದ, ಆದರೆ ಮುಖ್ಯಾಂಗವಾದ ಗೌಡ ಮಹಿಳೆಯರು ತಮ್ಮ ಉತ್ತರದಾಯಿತ್ವದ ಪಾಲು ಪಡೆದು ಸಮಾಜ ಪ್ರಗತಿಯ ಜವಾಬ್ದಾರಿಕೆ ಹೊರಬೇಕಾದುದು ಅನಿವಾರ್ಯವಾಗಿಬಿಟ್ಟಿತು. ಈ ಅನಿವಾರ್ಯತೆಯ ಯುಗ ಧರ್ಮಕ್ಕೆ ಅವರು ಸಜ್ಜಾದುದು ಒಂದು ಸೋಜಿಗದ ಸಂಗತಿ.

ವರ್ಣಾಶ್ರಮದ ಪರಿಭಾಷೆಯಲ್ಲಿ 'ಶೂದ್ರ'ಳಾಗಿದ್ದು ವಸಾಹತು ಸಂಸ್ಕೃತಿಯ ಸಂದರ್ಭದಲ್ಲಿ ಸಂಚಿಯ ಹೊನ್ನಮ್ಮನ ಉಪದೇಶಾರ್ಥದ 'ಹದಿಬದೆ'ಯಾಗಿದ್ದು ಪುರುಷ ಪ್ರಾಧಾನ್ಯತೆಯ ಸೆರಗಿನ ಚಿಪ್ಪಿನಲ್ಲಿ ಬಚ್ಚಿಟ್ಟುಕೊಳ್ಳುತ್ತಿದ್ದ ಗೌಡ ಹೆಣ್ಣು, ಸ್ವಾತಂತ್ರ್ಯಾ ನಂತರದಲ್ಲಿ ತನ್ನ ಸಮಾಜದಲ್ಲಿ ಉಂಟಾದ ವಿದ್ಯಾ ಪ್ರಗತಿ ಮತ್ತು ಆರ್ಥಿಕ ಕ್ರಾಂತಿಗಳಿಗೆ ಸಮಸ್ಪಂದಿಸುತ್ತಾ ಸಮಾಜದ ಏಳಿಗೆಯ ಎಲ್ಲಾ ವಿಷಯಗಳಲ್ಲಿ ತನ್ನ ಸಹಭಾಗಿತ್ವವನ್ನು ಪಡೆದುಕೊಳ್ಳುತ್ತಿದ್ದಾಳೆ. ಕೃಷಿ ಪ್ರಧಾನ ಸಂಸ್ಕಾರದ ಗೌಡ ಮಹಿಳೆ ಸಮಾನ ಅವಕಾಶಗಳನ್ನು ಪಡೆದು ಬದುಕಿನ ಎಲ್ಲಾ ಉತ್ತಮ ಕ್ಷೇತ್ರಗಳಲ್ಲೂ ತನ್ನ ಸಾಧನೆಯನ್ನು ಪ್ರತಿಬಿಂಬಿಸುತ್ತಿದ್ದಾಳೆ. ಸಾಂಸ್ಕೃತಿಕ ವಲಯಗಳಲ್ಲಿಯೂ ಇದೀಗ ಗೌಡ ಮಹಿಳೆ ಹೊಸ ಆಯಾಮದೆಡೆಗೆ ಹೊರಳಿ ನಿಂತಿದ್ದಾಳೆ. ಈ ಅಂಶವನ್ನಷ್ಟು ದಾಖಲಿಸುವುದು ಈ ಲೇಖನದ ಉದ್ದೇಶ.

ಹೊಟ್ಟೆಪಾಡಿನ ಬೇಸಾಯವೇ ಬದುಕಿಗಾಗಿ ಆರ್ಥಿಕವಾಗಿ ಹಿಂದುಳಿದಿದ್ದ ೨೦ನೇ ಶತಮಾನದ ಪೂರ್ವಾರ್ಧದವರೆಗಿನ ದಿನಮಾನಗಳಲ್ಲಿ ಗೌಡ ಸಮಾಜ ಮುಗ್ಗಟ್ಟಿನಿಂದ, ಅವಿಶ್ರಾಂತ ದುಡಿಮೆಯಿಂದ ಕೂಡಿತ್ತು. ಸ್ತ್ರೀ ವಿದ್ಯಾಭ್ಯಾಸ ದೂರಗಾಮಿ ಯಾಗಿದ್ದುದರಿಂದ ಹತ್ತಿರದಲ್ಲಿ ಉನ್ನತ ವ್ಯಾಸಂಗಾವಕಾಶಗಳಿಲ್ಲದ ಗೌಡ ಮಹಿಳೆ ಸಾಂಪ್ರದಾಯಿಕ ಮನೋಭಾವದಿಂದ ಕೂಡಿದ ಸದ್ಗೃಹಿಣಿಯಾಗಿ, ಒಳ್ಳೆಯ ಮಾತೆಯಾಗಿ ಮನೆಯ ಯಜಮಾನಿಯಾಗಿ ತನ್ನ ಪಾತ್ರ ನಿರ್ವಹಿಸುತ್ತಿದ್ದಳು. ಕೃಷಿ ವಾತಾವರಣದ ಅಹರ್ನಿಶಿ ದುಡಿಮೆಯಲ್ಲಿ ನಿರತಳಾದ ಗೌಡ ಮಹಿಳೆಗೆ ಸಾಂಸ್ಕೃತಿಕವಾಗಿ ಅಡಿಯಿಡಲು, ಲಲಿತ ಕಲೆಗಳನ್ನು ಅರಳಿಸಲು ಬೇಕಾದ ಬಿಡುವಾಗಲಿ, ನೆಮ್ಮದಿಯ ಪರಿಸರವಾಗಲಿ ಇರಲಿಲ್ಲ. ಪಾರಂಪರಿಕವಾದ ಜನಪದ ಸಂಸ್ಕೃತಿ ಮತ್ತು ಯಕ್ಷ ಕಲೆಗಳು ಮಾತ್ರ ಆಕೆಯ ಕೈ ಎಟುಕಿನಲ್ಲಿದ್ದವು. ಯಕ್ಷಗಾನದಲ್ಲಿ, ಸಕ್ರಿಯ ಭಾಗವಹಿಸುವಿಕೆ, ಮಹಿಳಾ ವಿರಹಿತವಾಗಿತ್ತು. ಈ ಅವಿರತ ದುಡಿಮೆ, ಮನೆಯ ಜವಾಬ್ದಾರಿ, ಆರ್ಥಿಕ ಮುಗ್ಗಟ್ಟು, ವಿಧಿ-ನಿಷೇಧಗಳು ಆಕೆಯನ್ನು ಸಾಂಸ್ಕೃತಿಕವಾಗಿ ಅಸ್ಪೃಶ್ಯಗಳನ್ನಾಗಿಸಿದ್ದುವು. ಹೀಗಾದುದರಿಂದಲೇ ಶಿಕ್ಷಣ, ಕಲೆ, ಸಾಹಿತ್ಯ, ಸಾಂಸ್ಕೃತಿಕ ಸಂವರ್ಧನೆಗಳಲ್ಲಿ ಇತರ ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳ ಇತರ ಸಮಾಜದ ಮಹಿಳೆಯರೊಡನೆ ಹೋಲಿಸುವಾಗ ಗೌಡ ಮಹಿಳೆ ಹಿಂದಿನ ಸಾಲಿನಲ್ಲಿ ನಿಂತಿರುವ ಚಿತ್ರ ಕಾಣಿಸುತ್ತದೆ.

ಆದರೆ ಪರಿವರ್ತನೆಯ ಗತಿಶೀಲತೆಯಲ್ಲಿ ಅರುಣೋದಯ ಮೂಡಿತು. ಹೊಂಗಿರಣ ಸೂಸಿತು. ಕ್ರಮೇಣ ಗೌಡ ಮಹಿಳೆ ವಿದ್ಯಾ ಪುನರುಜ್ಜೀವನಗೊಂಡು, ಆರ್ಥಿಕವಾಗಿ ಬದಲಾದ ಸನ್ನಿವೇಶದಲ್ಲಿ ತನ್ನ ಸಾಂಪ್ರದಾಯಿಕ ಚಿಪ್ಪಿನಿಂದ ಹೊರಬಂದು ಜೀವನದ ಎಲ್ಲಾ ರಂಗಗಳಲ್ಲಿಯೂ ತನ್ನ ಉತ್ಕರ್ಷವನ್ನು ಕಂಡುಕೊಳ್ಳಲು ಆಸ್ಪದವಾಯಿತು. ವಿಶೇಷವಾಗಿ ಸಾಂಸ್ಕೃತಿಕ ವಲಯದಲ್ಲಿಯೂ ಗೌಡ ಮಹಿಳೆ ತನ್ನ ಹೆಜ್ಜೆ ಗುರುತುಗಳನ್ನು ಪಡಿಮೂಡಿಸಲು ಸಾಧ್ಯವಾಯಿತು.

ಶಿಕ್ಷಣ ಕ್ಷೇತ್ರದಲ್ಲಿ ಜಿಲ್ಲಾ ಕೇಂದ್ರ ಮಂಗಳೂರು, ಮಡಿಕೇರಿಗಳಲ್ಲಿ ಮಿಷನರಿಗಳು, ಪಡುಕಡಲ ತಡಿಯ ಉಡುಪಿಯಲ್ಲಿ ಕೊಂಕಣಿಗರು ಹಲವೆಡೆ, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟು, ಗಾಂಧೀಜಿ ಹೇಳಿದ "ಸ್ತ್ರೀಯೊಬ್ಬಳು ಕಲಿತರೆ ಶಾಲೆಯೊಂದನ್ನು ತೆರೆದಂತೆ" ಎಂಬ ಮಾತಿಗೆ ಮೂರ್ತರೂಪ ಕೊಟ್ಟರು. ಇತ್ತ ಜಿಲ್ಲೆಯ ಗೌಡ ಜನಾಂಗದವರು ಆಹಾರ ಬೆಳೆಯಿಂದ ಆರ್ಥಿಕ ಬೆಳೆಯ ಹೊಸ ತೋಟಗಳನ್ನು ಸೃಷ್ಟಿ ಮಾಡಿ ಆರ್ಥಿಕ ಸಂಪನ್ನತೆ ತಲೆದೋರಿದರೆ ಅತ್ತ ಹತ್ತಿರದ ಊರುಗಳಲ್ಲಿ ಶಿಕ್ಷಣ ಸಂಸ್ಥೆಗಳ ತಲೆ ಎತ್ತುವಿಕೆಯಿಂದ ಗೌಡರು ತಮ್ಮ ಹೆಣ್ಣು ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸುವುದರ ಮೂಲಕ ಸ್ತ್ರೀ ವಿದ್ಯಾಭ್ಯಾಸದ ಉನ್ನತಿಗೆ ಸಹಾಯಕವಾಯಿತು. ಪರಿಣಾಮವಾಗಿ ಹಲವು ಗೌಡ ಹುಡುಗಿಯರು ತಮ್ಮ ಸ್ನಾತಕೋತ್ತರ ಪದವಿಗಳ ಉನ್ನತ ಶಿಕ್ಷಣವನ್ನು ಪೂರೈಸಿ ಇಂದು ಕೊಡಗು, ದಕ್ಷಣ ಕನ್ನಡ ಹಾಗೂ ರಾಜ್ಯದ, ರಾಷ್ಟ್ರದ

---

ತ್ಯಾಗತ್ತೂರು ಗ್ರಾಮ ಪಂಚಾಯಿತಿ ಸದಸ್ಯರಾಗಿಯೂ, ಮತ್ತು ಸಿದ್ದಾಪುರದ ಪತ್ರಕರ್ತರ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಇತ್ತೀಚೆಗೆ ಸಂಘ ಸಂಸ್ಥೆಗಳಲ್ಲಿ ಜನ ಜಾಗೃತಿ, ಜನಸೇವೆ, ಸಹಕಾರದಿಂದ ಬರುವ ಅನುದಾನ ಬರಿಸುವಲ್ಲಿ ಶ್ರೀಯುತರ ಪ್ರಯತ್ನ ಯಶಸ್ವಿಯಾಗಿದೆ.

ಅಂಚೆಮನೆ ಸುಧಿಯವರು ಮಂದ್ರೀರ ಬಾಲಕೃಷ್ಣ ಮತ್ತು ರಾಧ ದಂಪತಿಗಳ ಮಗಳು ನಮಿತಳನ್ನು ಮದುವೆಯಾಗಿ ಪುಟ್ಟ ಮಗು ಸ್ವಸ್ತಿಕ್ ಹಾಗೂ ತನ್ನ ತಾಯಿಯೊಂದಿಗೆ ಸುಖ ಸಂಸಾರ ಜೀವನ ಮಾಡುತ್ತಲಿರುವ ಶ್ರೀಯುತರಿಗೆ ತನ್ನ ಆಂದೋಲನ ವರದಿಗೆ ಜಿಲ್ಲಾ ಮಟ್ಟದ ಪುರಸ್ಕಾರ ಲಭಿಸಿದ್ದು; ಶ್ರಮಕ್ಕೆ ತಕ್ಕ ಫಲವಾಗಿದೆ. ಜನಾಂಗದ ಪರವಾಗಿ ಶ್ರೀಯುತರಿಗೆ ಶುಭ ಹಾರೈಕೆಗಳು.

- ಪಟ್ಟಡ ಪ್ರಭಾಕರ

---

ಹೊಸಿಲಿಗೆ ಹಚ್ಚು ಅರಿಶಿನ - ಅದು ಮಾಡುವುದು ಕ್ರಿಮಿ ಕೀಟಗಳ ನಾಶನ

ವಿವಿಧೆಡೆಗಳಲ್ಲಿ ದೊಡ್ಡ ದೊಡ್ಡ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ. ಶಿಕ್ಷಕಿಯರಾಗಿ, ಉಪನ್ಯಾಸಕರಾಗಿ, ಪ್ರಾಂಶುಪಾಲೆಯರಾಗಿ, ಶಿಕ್ಷಣ ಇಲಾಖೆಯ ನಿರ್ದೇಶಕರಾಗಿ, ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ, ರಾಷ್ಟ್ರದ ಮೀಸಲು ಮಹಿಳಾ ಪೋಲಿಸು ಪಡೆಯಲ್ಲಿ ಮಹಿಳಾ ವೈದ್ಯಾಧಿಕಾರಿಯಾಗಿ ಉದ್ಯೋಗ ನಿರ್ವಹಿಸುತ್ತಿದ್ದಾರೆ.

ಇಂಥ ಶುಭೋದಯಕ್ಕೆ ಹೊಸ ಚೈತನ್ಯ ನೀಡುವಂತೆ 'ಆಧುನಿಕ ಸುಳ್ಯದ ಭಾಗ್ಯಶಿಲ್ಪಿ' ಎಂದೇ ಕೀರ್ತಿತರಾದ ಶ್ರೀ ಕುರುಂಜಿ ವೆಂಕಟರಮಣ ಗೌಡರು ೧೯೭೬ರಲ್ಲಿ ನೆಹರೂ ಸ್ಮಾರಕ ಕಾಲೇಜನ್ನು ಗೌಡ ಪ್ರಧಾನ ಸುಳ್ಯದಲ್ಲಿ ಸ್ಥಾಪಿಸಿದ್ದು, ಸ್ನಾತಕ ಶಿಕ್ಷಣ ಗೌಡ ಹೆಣ್ಣು ಮಕ್ಕಳ ಮನೆ ಬಾಗಿಲಿಗೆ ಬಂದಂತಾಗಿ ಬಿಟ್ಟಿತು. ವರ್ಷಂಪ್ರತಿ ನೂರಾರು ಹೆಣ್ಣು ಮಕ್ಕಳು ಸುಲಭವಾಗಿ ಉನ್ನತ ಶಿಕ್ಷಣ ಪಡೆಯುವಂತಾಯಿತು. ೮೦ ದಶಕದಲ್ಲಿ ಕೊಡಗಿನ ಸೋಮವಾರಪೇಟೆ ಸುಳ್ಯ ತಾಲ್ಲೂಕಿನ ಸುಬ್ರಹ್ಮಣ್ಯಗಳಲ್ಲಿ ಖಾಸಗಿ ಪ್ರಥಮ ದರ್ಜೆ ಕಾಲೇಜುಗಳು, ಕುಶಾಲನಗರ, ಬೆಳ್ಳಾರೆ, ಉಪ್ಪಿನಂಗಡಿ, ಬೆಳ್ತಂಗಡಿ ಬೆಟ್ಟಂಪಾಡಿಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಸ್ಥಾಪನೆಗೊಂಡದ್ದು ಗೌಡ ಹೆಣ್ಣು ಮಕ್ಕಳ ಉನ್ನತ ವ್ಯಾಸಂಗದ ಅವಕಾಶಗಳನ್ನು ಮತ್ತಷ್ಟು ಉಜ್ವಲಗೊಳಿಸಿದವು. ಇವೆಲ್ಲಕ್ಕೂ ಕಲಶ ಇಟ್ಟಂತೆ ೮೦ರ ದಶಕದಲ್ಲಿ ಸುಳ್ಯದಲ್ಲಿ ಕುರುಂಜಿಬಾಗ್‌ನ ವಿದ್ಯಾನಗರಿಯಲ್ಲಿ ಉತ್ತುಂಗ ಸಾನುವಿನಂತೆ ಶ್ರೇಣಿ ಶ್ರೇಣಿಯಾಗಿ ತಲೆ ಎತ್ತಿನಿಂತ ಶ್ರೀ ಕುರುಂಜಿಯವರ ಹೆಮ್ಮೆಯ ತಾಂತ್ರಿಕ ವಿದ್ಯಾಲಯಗಳು, ದಂತವೈದ್ಯ-ಕಾನೂನು ಕಾಲೇಜುಗಳು ಸಾವಿರಾರು ಗೌಡ ಹುಡುಗಿಯರು ಅವುಗಳಲ್ಲಿ ವ್ಯಾಸಂಗ ನಡೆಸಿ ದಂತ ವೈದ್ಯರಾಗಲು, ಶುಶ್ರೂಷಕಿಯರಾಗಲು, ತಂತ್ರಶಾಸ್ತ್ರಜ್ಞೆ (ಎಂಜಿನಿಯರ್ಸ್)ಯರಾಗಲು, ಮಹಿಳಾ ನ್ಯಾಯವಾದಿಗಳಾಗಲು ಅನುವು ಮಾಡಿ ಕೊಟ್ಟಿವೆ. ಸಮುದಾಯದ ಭಾಗ್ಯ ವಿಶೇಷದಿಂದ ಇಂಥ ಶಿಕ್ಷಣ ಸುವರ್ಣಾವಕಾಶಗಳ ಬಾಗಿಲು ಗೌಡ ವಿದ್ಯಾರ್ಥಿನಿಯರಿಗೆ ತೆರೆದುನಿಂತಿದೆ.

ಗೌಡ ಸಮಾಜದಲ್ಲಿ ಹಣದ ಬೆಳೆಗಳಿಂದ ಆಯಾಚಿತವಾಗಿ ಉಂಟಾದ ಸಂಪತ್ತು ಮತ್ತು ಮಹಿಳಾ ಲೋಕದಲ್ಲಿ ಆದ ವಿದ್ಯಾ ಪ್ರಗತಿ ಅನುಷಂಗಿಕವಾದ ಹತ್ತು ಹಲವು ಜಾಗೃತಿಗಳಿಗೆ ದಾರಿ ತೆರೆದುವು. ಸಾಕ್ಷರಸ್ಥಳಾದ ಗೌಡ ಮಹಿಳೆ ಸುಸಂಸ್ಕೃತಳಾಗಿ, ಸಂವೇದನಾಶೀಲಳಾಗಿ ತನ್ನ ಸುಪ್ತ ಚೇತನದಲ್ಲಿ ಹುದುಗಿದ್ದ ಪ್ರತಿಭೆಯನ್ನು ಸರ್ವತೋಮುಖವಾಗಿ ಲಲಿತ ಕಲೆಗಳ ರೂಪದಲ್ಲಿ ಅಭಿವ್ಯಕ್ತಿಸತೊಡಗಿದ್ದು ಭಾವಿಸುವುದಾದರೆ, ಅಭಿನವ ಅಂಡಯ್ಯರೆನಿಸಿದ ಕೀರ್ತಿಶೇಷ ಕೊಳಂಬೆಯವರಿಂದ ಕನ್ನಡಾಭಿಮಾನದ-ಸಾಹಿತ್ಯದ ದೀಕ್ಷೆ, ಸ್ಫುರಣೆ ಪಡೆದು ಸಾಹಿತ್ಯ ರಚಿಸಿದ ಶ್ರೀಮತಿಯವರಾದ ಜಯಮ್ಮ ಬಿ. ಚೆಟ್ಟಿಮಾಡ, ಲೀಲಾವತಿ ಕೊಳಂಬೆ, ಲಲಿತಾಜ ಮಲ್ಲಾರ, ವೇದಾವತಿ ಅನಂತ, ರೇವತಿ ನಂದನ, ಎನ್. ಲಲಿತರಂಥ ಹಿರಿಯ ಲೇಖಕಿಯರಾಗಲಿ, ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ವಾತಾವರಣ, ಸಾಪ್ತಾಹಿಕಗಳ ಸಮೃದ್ಧ ಪ್ರಸಾರ ಮತ್ತು ಹೊಸದಾಗಿ ಹುಟ್ಟಿಕೊಂಡ ಪತ್ರಿಕೆಗಳಂಥ ಸಮೂಹ ಮಾಧ್ಯಮಗಳಿಂದ ಪ್ರೇರಣೆ ಪಡೆದು ಸಾಹಿತ್ಯದಲ್ಲಿ ಪಾದಾರ್ಪಣೆ ಮಾಡುತ್ತಿರುವ ಅನೇಕ ಪ್ರತಿಭೆಗಳಿವೆ.

ಮುಕ್ತ ಅವಕಾಶಗಳ ಹೊಸ ಸಾಂಸ್ಕೃತಿಕ ಪರಿಸರದಲ್ಲಿ ಗೌಡ ಹೆಣ್ಣು ಯಕ್ಷಗಾನ, ನಾಟಕ, ನೃತ್ಯವೇ ಮೊದಾಲಾದ ವಿವಿಧ ಕಲಾ ಪ್ರಕಾರಗಳಿಗೆ ತನ್ನನ್ನು ತೆರೆದುಕೊಂಡಳು. ವಾರ್ಷಿಕೋತ್ಸವಗಳಲ್ಲಿ, ಯುವಜನ ಮೇಳಗಳಲ್ಲಿ, ಯುವತಿ ಬಳಗ ಕೂಟಗಳ ಮೂಲಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಳು. ಹೆಣ್ಣುಮಕ್ಕಳ ಯಕ್ಷಗಾನ ಮೇಳಗಳಲ್ಲಿ ಪಾತ್ರ ವಹಿಸುವುದು, ಸ್ಪರ್ಧಾತ್ಮಕ ಮೇಳಗಳ ತಂಡಗಳಲ್ಲಿ ಕೂಡಿಕೊಂಡು ನೆಲದ ಕಲೆ ಯಕ್ಷಗಾನಕ್ಕೆ ಜಾನಪದ ಕಲೆಗಳಿಗೆ ನೀರೆರೆದಳು. ಅಭಿನಯ, ಹವ್ಯಾಸಿ ತಂಡದ ನಾಟಕಗಳಲ್ಲಿ ಗೌಡಯುವತಿಯರು ನಟನೆ ಅಭಿನಯ ಕಲೆಯಲ್ಲಿ ಪ್ರತಿಭೆ ಪ್ರದರ್ಶಿಸಿದರು. ಮೈಸೂರಿನ ಖ್ಯಾತ ನಾಟಕ ಸಂಸ್ಥೆಯಾದ ರಂಗಾಯಣದಲ್ಲಿ ಗೌಡ ಮಹಿಳಾ ಸಮಾಜದ ಕೊಡುಗೆಯಾಗಿ ಎಂ. ಎಸ್. ಗೀತಾ ಉತ್ತಮ ಅಭಿನೇತ್ರಿಯಾಗಿ ಅಂತರರಾಷ್ಟ್ರ ಸಾಂಸ್ಕೃತಿಕ ರಾಯಭಾರಿಯಾಗಿ ವಿದೇಶಗಳಲ್ಲಿ ಪ್ರವಾಸಗೈದಿದ್ದಾರೆ. ಹಾಗೆಯೇ ಕೂಚುಪುಡಿ, ಭರತ ನಾಟ್ಯಗಳಲ್ಲಿ ಎಂ.ಬಿ. ಸುಷ್ಮಾ ಬಾಲಚಂದ್ರ ರಾಷ್ಟ್ರ ಮಟ್ಟದ ಎನ್. ಎಸ್. ಎಸ್. ಶಿಬಿರಗಳಲ್ಲಿ ಹೆಸರು ಮಾಡಿರುವ ನೃತ್ಯ ಕಲಾವಿದೆಯಾಗಿದ್ದಾರೆ. ನಾದ-ನೃತ್ಯ ಸಂಸ್ಥೆಯ ಪ್ರೋತ್ಸಾಹದಿಂದ ಹಲವು ಗೌಡ ಹೆಣ್ಣು ಮಕ್ಕಳು ಸಂಗೀತದ ಸಂಸ್ಕಾರ ಪಡೆಯುತ್ತಿರುವ ರಂಗೋಲಿ, ಚಿತ್ರಕಲೆ ಮೊದಲಾದ ಲಲಿತ ಕಲೆಗಳಲ್ಲಿ ಪರಿಣತಿ ಪಡೆಯುತ್ತಿರುವ ಹೆಣ್ಣುಗಳು ಎಲೆಮರೆಯ ಕಾಯಿಗಳಂತೆ ಮನೆ ಮನೆಗಳಲ್ಲಿದ್ದಾರೆ.

ಸಾಮಾಜಿಕ ಕಳಕಳಿ, ಪರಿಸರಾಸಕ್ತಿ, ಕ್ರೀಡೆ ಮೊದಲಾದವುಗಳಲ್ಲಿಯೂ ಗೌಡ ಮಹಿಳೆ ತನ್ನ ಒಲವನ್ನು, ಸಾಧನೆಯನ್ನು ವ್ಯಕ್ತಪಡಿಸಿದ್ದಾಳೆ. ಶ್ರೀಮತಿಯವರಾದ ಕಾವೇರಮ್ಮ, ದೇವಿಕುಮಾರಿ, ಮೀನಾಕ್ಷಿಗೌಡ ಮುಂತಾದವರು ಸುಳ್ಯದಲ್ಲಿ ಸಮಾಜ ಸುಧಾರಣೆಯ ಕಾಳಜಿ ತೋರಿದ್ದರೆ, ಲೋಕೇಶ್ವರಿ ವಿನಯಚಂದ್ರರು ಬೆಳ್ತಂಗಡಿಯ, ಸಕ್ರಿಯ ರಾಜಕಾರಣದಲ್ಲಿ ಮಿಂಚಿದ್ದಾರೆ. ಮಹಿಳಾ ಮೀಸಲಾತಿಗನುಸರಿಸಿ ಹಲವು ಮಹಿಳೆಯರು ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಸೇರಿ ರಾಜಕೀಯ ಮುತ್ಸದಿತನಕ್ಕೆ ನಾಯಕತ್ವಕ್ಕೆ ತರಬೇತಿ ಪಡೆಯುತ್ತಿದ್ದಾರೆ. ಕೊಡಗಿನ ಗೌಡ ವನಿತೆಯರು ರಾಜ್ಯಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸಿ ಹೆಸರು ಮಾಡಿದ್ದಾರೆ.

ವ್ಯಕ್ತಿ ಆಡುವ ಭಾಷೆ, ಬಳಸುವ ಆಹಾರ ಪದ್ಧತಿ, ನಡವಳಿಕೆಯ ಆಚರಣೆಗಳು, ನಂಬಿಕೆಗಳು, ಧರ್ಮ-ವಿವಾಹ ಸಂಸ್ಥೆಗಳು ಒಂದು ಸಮಾಜದ ಸಾಂಸ್ಕೃತಿಕ ಸಂಗತಿಗಳಾಗಿ ಬಿಡುತ್ತವೆ. ಈ ಎರಡು ಜಿಲ್ಲೆಗಳ ಸ್ತ್ರೀ ಸಮುದಾಯದ ಮೇಲೆ ಅರೆಗನ್ನಡ, ತುಳು ಮತ್ತು ಕನ್ನಡ ಈ ಮೂರು ಪ್ರಧಾನ ಮನೆಮಾತುಗಳ ಜೊತೆಗೆ ವೈವಿಧ್ಯಪೂರ್ಣವಾದ ಹಲವು ಭಾಷಾ ಸಂಸ್ಕೃತಿಗಳು ಸಂಪರ್ಕ ಬೆಳೆಸಿ ಸಾಮರಸ್ಯಗೊಂಡಿವೆ. ನಾಗರಿಕವಾಗುತ್ತಿರುವ, ಪರಸ್ಪರ ಓಡಾಟ ಹೆಚ್ಚಾಗುತ್ತಿರುವ ಈ ಸಂದರ್ಭಗಳಲ್ಲಿ ಸಾಂಪ್ರದಾಯಿಕ ವೇಷಭೂಷಣ ಮತ್ತು ಆಹಾರ

# ಏಪ್ರಿಲ್ 23ರ ಕೊಡಗು ಗೌಡ ಕ್ರಿಕೆಟ್ ಕಪ್ - ಬಾಳೆಡಿ ತಂಡದ ಮಡಿಲಿಗೆ




ಗೌಡ ಜನಾಂಗದ ಇತಿಹಾಸದಲ್ಲೇ ಪ್ರಪ್ರಥಮ ಬಾರಿಗೆ ಮನೆಯೊಂದರ ಗೌಡ ಜನಾಂಗದ ಕುಟುಂಬದ ಪ್ರಕಾರ ಕ್ರಿಕೆಟ್ ಆಟ ಆಡಿದ ಕೀರ್ತಿ ಕೆದಂಬಾಡಿ ಮನೆತನದ್ದು. ಅಂತೆಯೇ ದಿನಾಂಕ 20-4-2001ರಂದು ಈ ಮೇಲಿನ ಕಪ್ ನಡೆಯುವುದರ ಪ್ರಯುಕ್ತ ಶ್ರೀ ಕೆದಂಬಾಡಿ ಆರ್. ರಾಜು, ಇಂಜಿನಿಯರ್ ಇವರಿಂದ ಏಪ್ರಿಲ್ 20ರಂದು ಉದ್ಘಾಟಿಸಲ್ಪಟ್ಟಿತು. ಪಂದ್ಯಾಟವು ಕೆದಂಬಾಡಿ ಕುಟುಂಬಸ್ತರ ಮತ್ತು ಪಾಕ ಮುಕ್ಕಾಟಿ ಕುಟುಂಬಸ್ತರ ನಡುವೆ ನಡೆಯಿತು. ಇದರಲ್ಲಿ 33 ತಂಡಗಳಿದ್ದು, ಬಾಳೆಡಿ ತಂಡ ಜಯ ಪಡೆಯಿತು. 23-4-2001ರಂದು ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಕೆದಂಬಾಡಿ ಕುಟುಂಬದ ಪಟ್ಟೆದಾರರಾದ ಸುಬ್ಬಯ್ಯನವರು ವಹಿಸಿದ್ದರು. ಮುಖ್ಯ ನೆಂಟ್ರುಗಳಾಗಿ ಕುಶಾಲನಗರದ ಯಜ್ಞ ರೋಡ್‌ಲೈನ್ಸ್‌ನ ಮಾಲೀಕರಾದ ಕಟ್ಟೋಳಿ ಶ್ರೀಧರ್, ಜಿಲ್ಲಾ ಪಂಚಾಯತಿ ಸದಸ್ಯರಾದ ಕೋರನ ಗಂಗಮ್ಮ ಪೂಣಚ್ಚ, ಗೌಡ ಸಾಂಸ್ಕೃತಿಯ ಅಕಾಡೆಮಿಯ ಅಧ್ಯಕ್ಷ ತುಂತಜೆ ಗಣೇಶ್, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಮತ್ತು ಚೆಟ್ಟಳ್ಳಿಯ ಕಾಫಿ ಬೆಳೆಗಾರರಾದ ಪೆರಿಯನ ಜಯಾನಂದನವರು ಆಗಮಿಸಿದ್ದರು ಎಂದು ತಿಳಿದು ಬಂದಿದೆ.

- ಸಂಗಾತಿ

---

ಪದ್ಧತಿಗಳಲ್ಲಿ ವ್ಯತ್ಯಾಸವುಂಟಾಗಿದೆ. ಸಂಕುಚಿತ ಅಂಧಶ್ರದ್ಧೆ, ಮೂಢನಂಬಿಕೆಗಳು ಕಳಚಿಕೊಳ್ಳುತ್ತಾ ಸಹಿಷ್ಣುತೆಯ ನೆಲೆಗಟ್ಟಿನಲ್ಲಿ ಹೊಸ ಜೀವನಶ್ರದ್ಧೆ ಮತ್ತು ಉದಾರ ಜೀವನ ಮೌಲ್ಯಗಳನ್ನು ಗೌಡ ಮಹಿಳೆ ಅಳವಡಿಸಿಕೊಳ್ಳುವಂತಾಗಿದೆ. ಈ ಎರಡು ಜಿಲ್ಲೆಗಳ ಆಚೆಗಿನ ಪ್ರದೇಶಗಳ ಒಕ್ಕಲಿಗ ಗೌಡರಲ್ಲಿ ವಿವಾಹ ಸಂಬಂಧಗಳನ್ನು ಮಾನ್ಯ ಮಾಡುವುದರೊಂದಿಗೆ, ಈ ಕೊಳ್ಕೊಡೆಯಿಂದ ಪ್ರಾದೇಶಿಕ ಜನಾಂಗ ಸಂಬಂಧಗಳ ಹಾಗೂ ವಿಭಿನ್ನ ಆಚಾರ ವಿಚಾರಗಳ ಅನುಸರಣೆಯ ಬೇರೆ ಬೇರೆ ಗೌಡ ಸಮಾಜಗಳ ಸಂಕರವಾಗುತ್ತಾ ಗೌಡ ಮಹಿಳೆಯ ಸಾಂಸ್ಕೃತಿಕ ಅರ್ಥ ಪರಿಧಿ ವಿಶಾಲವಾಗುತ್ತಾ ನಡೆದಿದೆ.

ಹೀಗೆ ಕೆಲವೇ ದಿನಗಳ ಹಿಂದೆ ಬಡತನ ಮತ್ತು ಅವಿದ್ಯೆಗಳಿಂದ ತೀವ್ರ ಹಿಂದುಳಿದಿದ್ದು, ಸಾಂಸ್ಕೃತಿಕ ರಂಗದ ಲಲಿತ ಕಲೆಗಳು ಕೇವಲ ಸಮಾಜದ ಉನ್ನತ ವರ್ಗದ ಮಹಿಳೆಯರಿಗಷ್ಟೆ ಮೀಸಲು ಎಂಬ ಕೀಳರಿಮೆಯಿಂದ ಕೂಡಿದ್ದ ಗೌಡ ಮಹಿಳೆ ಪರಿವರ್ತನೆಯ ಚಲನ ಶೀಲತೆಯಲ್ಲಿ ತನ್ನ ನೈಜ ಜಡತೆಗಳನ್ನು ಜಾಡಿಸಿ, ಮೈಕೊಡವಿಕೊಂಡು ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನ ಸಾಮುದಾಯಿಕ ಛಾಪಿನೊಡನೆ ಕ್ರಿಯಾನ್ವಿತಳಾಗುತ್ತಿರುವುದೊಂದು ಶುಭದ ಸಂಕೇತ. ಪ್ರಕೃತದ ಗೌಡರಮಣಿಯರು ಐ.ಎ.ಎಸ್, ಶಾಸಕಿ, ಮಂತ್ರಿಮಾನ್ಯೆಯರಾಗದಿರಬಹುದು. ಮ್ಯಾಜಿಸ್ಟ್ರೇಟ್‌ರಂತೂ ಆಗಿದ್ದಾರೆ. ಆದರೆ ಸಾಕ್ಷರ ಸಂಸ್ಕೃತಿ ಲಲಿತ ಕಲೆಗಳಲ್ಲಿ ಸಂಸ್ಕಾರ ಹೊಂದುತ್ತಾ ಸಾಂಸ್ಕೃತಿಕ ಹೊರಳುದಾಯ ಹೊಸ್ತಿಲಿನಲ್ಲಿ ನಿಂತು ಹೊಸ ಆಯಾಮದೆಡೆಗೆ ಗಮನಿಸಲು ಸಜ್ಜಾಗುತ್ತಿರುವುದಕ್ಕಾಗಿ ಗೌಡ ಮಹಿಳಿಎ ಅಭಿನಂದನೀಯಳಾಗಿದ್ದಾಳೆ.

ಲೇಖಕರು : ಶ್ರೀಮತಿ ಎಲ್. ಸುಮಂಗಲ ಶಿವಣ್ಣ,
ಉಪನ್ಯಾಸಕರು, ಎನ್. ಎಂ. ಕಾಲೇಜು, ಸುಳ್ಯ

## ಆಂಗ್ಲ ಭಾಷೆಯ ಬಲೆಯಲ್ಲಿ

ಆಂಗ್ಲ ಭಾಷೆಯ ಬಲೆಯೊಳಗೆ
ಬೀಳುವಿರೇಕೆ ಮಿಗಗಳ ತೆರದಿ
ಸ್ವತಂತ್ರ ಕರುನಾಡ ಪಕ್ಷಿಗಳೇ
ಕನ್ನಡ ವೃಕ್ಷದ ಕೊಂಬೆಗೆ ಹಾರಿ ||೧||

ಶಬರರ ಸ್ನೇಹವು ನಿಮಗದು ಸಂಚು
ಮಾತೆಯ ಹಿರಿಮೆಯ ಮರೆಯುವುದೇ ।
ಮಾತೆಯ ನುಡಿಯ ಧ್ವನಿಸಿರಿ ನೀವು
ಅಂಜುವಿರೇಕೆ ಮಿಗಗಳ ತೆರದಿ ||೨||

ಹಾರಾಡಿ ಸಂತಸದಿ ಭಾರತದ ಪಕ್ಷಿಗಳೇ
ಹಿಂದಿಯು ನಿಮಗಾಗಲಿ ನಾಯಕಿಯು
ಆಂಗ್ಲ ಭಾಷೆಯು ವಿದೇಶದ ತರುಣಿ
ಅವಳ ಮೋಹದ ಬಲೆಗೆ ಬೀಳದಿರಿ ||೩||

ವ್ಯವಹಾರಕೆ ವ್ಯಾಪಾರಕೆ ಇರಲಿ ಸ್ನೇಹ
ಇರಲಿ ಪರಿಚಯ ಹಿತಮಿತವಾಗಿ ।
ಆದರೆ ಮರೆಯುವಿರೇಕೆ ಸ್ವಮಾತೆಯನು
ಸ್ವಾತಂತ್ರ್ಯ ದೊರಕಿದೆ ರಾಷ್ಟ್ರದ ನೆಲಕೆ ||೪||

ಧೀರ ಕನ್ನಡಿಗರೆ ಇನ್ನಾದರೂ ನೀವು
ಕನ್ನಡಲ್ಲೆ ಮುದ್ರಿಸಿರಿ ಶುಭಾಶಯ ಪತ್ರ
ಇಂಗ್ಲೀಷ್ ಗ್ರೀಟಿಂಗ್ಸ್ ಒಂದೆಡೆ ಇರಲಿ
ಕನ್ನಡ ಶುಭಾಶಯಗಳೂ ಮೆರೆದಾಡಲಿ ||೫||

ಕನ್ನಡವ ನೆನೆಯಿರಿ, ಕನ್ನಡದಿ ಬರೆಯಿರಿ
ಕನ್ನಡವೆ ಜನನಿ ಎಂದಿಗೂ ಮರೆಯದಿರಿ ।
ತಾಯ ಮರೆತು ಪರನಾರಿಯ ಸಲುಗೆಯೆ ?
ಕೇವಲ ಸೇವೆಗಿರಲಿ, ಆಂಗ್ಲದ ಕನ್ನಿಕೆಯು ||೬||

ಕವಿ : 'ವಾಣಿ ಕುಮಾರ್', ಮಂಡೆಕೋಲು, ಸುಳ್ಯ. ದ. ಕ.

(ಸ್ವಾತಂತ್ರ್ಯ ಬಂದು 50 ವರ್ಷ ಕಳೆದರೂ, ಶುಭಾಶಯ ಪತ್ರಗಳು ಆಂಗ್ಲ ಭಾಷೆಯಲ್ಲೆ ಮಾತ್ರ ಮುದ್ರಕವಾಗುತ್ತಿರುವುದನ್ನು ಕಂಡು, ಬೇಸರದಿಂದ ಬರೆದ ಕವನ)

---

# ಗೌಡಕಪ್ - ೨೦೦೧ ಟೆನ್ನಿಸ್ ಕ್ರಿಕೆಟ್ ಪಂದ್ಯಾವಳಿ ಪ್ರಶಸ್ತಿ ಪುನಃ ಬಾಳಡಿ ತಂಡಕ್ಕೆ



ತೋಟಂಬೈಲು ದಿ. ರಾಘವೇಂದ್ರ ಅವರ ಜ್ಞಾಪಕಾರ್ಥ ಅವರ ಕುಟುಂಬಸ್ಥರು ನೀಡಿದ ಅತ್ಯಾಕರ್ಷಕ ಟ್ರೋಫಿಯನ್ನು ತೋಟಂಬೈಲು ಪ್ರದೀಪ್ ಮತ್ತು ತುಂತಜೆ ಗಣೇಶ್ ಅವರು ಬಾಳಡಿ ತಂಡಕ್ಕೆ ಪ್ರಧಾನ ಮಾಡುತ್ತಿರುವರು.



ಪೋರೆ ಕುಂಜಿಲನ ತಂಡಕ್ಕೆದಂಬೆಕೋಡಿ ಸುಬ್ರಾಯ ದಂಪತಿಗಳ ಜ್ಞಾಪಕಾರ್ಥಅವರ ಪುತ್ರ ಮಾಜೀ ಶಾಸಕ ದಂಬೆಕೋಡಿ ಎಸ್. ಮಾದಪ್ಪ ಮತ್ತು ದೇವಿಪ್ರಸಾದ್ ಅವರು ಆಕರ್ಷಕ ಟ್ರೋಫಿಯನ್ನು ನೀಡುತ್ತಿರುವರು.

ಕೂದಲೆಳೆಯ ಅಂತರದ ವಿರೋಚಿತ ಸೋಲಿಗೆ ಶರಣಾದ ಪೋರೆಕುಂಜಿಲನ ಕಿಕ್ಕಿರಿದು ನೆರೆದ ಪ್ರೇಕ್ಷಕರ ನಡುವೆ ರೋಚಕ ಅಂತಿಮ ಪಂದ್ಯ

ಮಡಿಕೇರಿ, ಮೇ. 5 ರಂದು ಕಿಕ್ಕಿರಿದು ನೆರೆದ ಕ್ರೀಡಾ ಪ್ರೇಮಿಗಳ ಸಮ್ಮುಖದಲ್ಲಿ ಸ್ಥಳೀಯ ಮ್ಯಾನ್ಸ್ ಕಾಂಪೌಂಡ್ ಮೈದಾನದಲ್ಲಿ ಇಂದು ಅಪರಾಹ್ನ ನಡೆದ 'ಗೌಡ ಕಪ್ 2001' ಟೆನ್ನಿಸ್ ಬಾಲ್ ಕ್ರಿಕೆಟ್ ಪಂದ್ಯಾವಳಿಯ ರೋಚಕ ಅಂತಿಮ ಪಂದ್ಯದಲ್ಲಿ ಬಾಳಡಿ ತಂಡ ರೋಮಾಂಚಕಾರಿ ಗೆಲುವು ಸಾಧಿಸಿ ಆಕರ್ಷಕ ಟ್ರೋಫಿಯನ್ನು ಎತ್ತಿ ಹಿಡಿಯಿತು.

ಮೂರ್ನಾಡು ಗೌಡ ಯುವಕ ಸಂಘದ ವತಿಯಿಂದ ಕಳೆದ ಹತ್ತು ದಿನಗಳಿಂದ ನೈಜ ಕ್ರಿಕೆಟ್ ಆಟದ ರಸದೌತಣವನ್ನು ನೀಡಿದ ಗೌಡ ಕುಟುಂಬಗಳ ನಡುವಿನ ಗೌಡ ಕಪ್ ಟೆನ್ನಿಸ್ ಬಾಲ್ ಕ್ರಿಕೆಟ್ ಪಂದ್ಯಾವಳಿಯ ಅಂತಿಮ ಪಂದ್ಯದಲ್ಲಿ ಕೇವಲ 3 ರನ್‌ಗಳ ಅಂತರದಿಂದ ಬಾಳಡಿ ತಂಡ ಗೆಲುವಿನ ನಗೆ ನಕ್ಕಿತಾದರೆ, ಪ್ರಬಲ ಸ್ಪರ್ಧೆ ನೀಡಿದ ಪೋರೆ ಕುಂಜಿಲನ ತಂಡ ವೀರೋಚಿತ ಸೋಲಿಗೆ ತಲೆ ಬಾಗಿತು.

ಇಂದು ಅಪರಾಹ್ನ ತೋಟಂಬೈಲು ಪ್ರದೀಪ್ ಹಾಗೂ ಗೌಡ ಸಾಂಸ್ಕೃತಿಕ ಅಕಾಡೆಮಿಯ ಅಧ್ಯಕ್ಷರಾದ ತುಂತಜೆ ಗಣೇಶ್ ಅಂತಿಮ ಪಂದ್ಯಕ್ಕೆ ಸಜ್ಜಾಗಿ ನಿಂತ ಬಾಳಡಿ ಮತ್ತು ಪೋರೆಕುಂಜಿಲನ ತಂಡದ ಆಟಗಾರರಿಗೆ ಶುಭ ಹಾರೈಸುವ ಮೂಲಕ ಪಂದ್ಯಕ್ಕೆ ವಿದ್ಯುಕ್ತ ಚಾಲನೆ ನೀಡಿದರು.

ಟಾಸ್ ಗೆದ್ದು ಮೊದಲು ಬ್ಯಾಟಿಂಗ್ ಆಯ್ದುಕೊಂಡ ಬಾಳಡಿ ತಂಡ ನಿಗಧಿತ 15 ಓವರ್‌ಗಳಲ್ಲಿ ಅತೀ ಹೆಚ್ಚಿನ ರನ್ ಪೇರಿಸುವ ಪ್ರಯತ್ನವಾಗಿ ಆಕ್ರಮಣಕಾರಿ ಬ್ಯಾಟಿಂಗ್ ನಡೆಸುವ ಪ್ರಯತ್ನಕ್ಕೆ ಮುಂದಾಗಿತ್ತಾದರೂ, ಪೋರೆಕುಂಜಿಲನ ತಂಡ ತನ್ನ ಪರಿಣಾಮಕಾರಿ ಫೀಲ್ಡಿಂಗ್, ಕರಾರುವಾಕ್ಕ್ ಬೌಲಿಂಗ್‌ನ

ಬಾಳಾಡಿ ಪ್ರಥಮ ಬಹುಮಾನ ಪಡೆದ ತಂಡ



ಪೋರೆಕುಂಜಿಲನ ದ್ವಿತಿಯ ಬಹುಮಾನ ಪಡೆದ ತಂಡ



ಮೂಲಕ ಬಾಳಡಿ ತಂಡದ ಬ್ಯಾಟ್ಸ್‌ಮನ್‌ಗಳನ್ನು ಕಟ್ಟಿ ಹಾಕುವಲ್ಲಿ ಭಾಗಶಃ ಯಶಸ್ವಿಯಾಯಿತು.

ಪೋರೆಕಂಜಿಲನ ತಂಡದ ನಾಯಕ ಪ್ರಶಾಂತ್ ತಮ್ಮ ಅತ್ಯಮೋಘ ಬೌಲಿಂಗ್ ಪ್ರದರ್ಶನ ನೀಡಿದರಲ್ಲದೆ, ಪಂದ್ಯದ ಮೊದಲ ಓವರ್‌ನಲ್ಲಿ ಒಂದೇ ಒಂದು ರನ್ ಎದುರಾಳಿಗೆ ನೀಡದೆ ಬಾಳಡಿ ತಂಡವನ್ನು ಕಕ್ಕಾಬಿಕ್ಕಿಗೊಳಿಸಿದರು. ಈ ನಡುವೆಯೇ ಬಾಳಡಿ ತಂಡದ ರವಿ ಅವರು ಸಂದರ್ಭಕ್ಕೆ ತಕ್ಕ ಆಟದ ಪ್ರದರ್ಶನ ನೀಡಿ 18 ಬಾಲ್‌ಗಳಲ್ಲಿ 13 ರನ್‌ಗಳನ್ನು ಗಳಿಸಿ, ತಂಡದ ಮೊತ್ತವನ್ನು ಉಬ್ಬಿಸಲು ನೆರವಾದರು. ಎದುರಾಳಿ ಪೋರೆಕುಂಜಿಲನ ತಂಡದ ಪ್ರಶಾಂತ್ ಹಾಗೂ ಬನ್ನಿ ಚಂಗಪ್ಪ ತಮ್ಮ ಸೊಗಸಾದ ಬೌಲಿಂಗ್ ಪ್ರದರ್ಶನದಲ್ಲಿ ತಲಾ 2 ವಿಕೆಟ್ ಗಳಿಸಿ, ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರರಾದರು.

ಒಂದು ಹಂತದಲ್ಲಿ ಬಾಳಡಿ ತಂಡ 13 ಓವರ್‌ಗಳಲ್ಲಿ 7 ವಿಕೆಟ್ ನಷ್ಟಕ್ಕೆ 59 ರನ್ ಗಳಿಸಿತ್ತು. ಆ ನಂತರದ 2 ಓವರ್‌ಗಳಲ್ಲಿ ಪೋರೆ ಕುಂಜಿಲನ ತಂಡ ಸೊಗಸಾದ ಬೌಲಿಂಗ್ ಪ್ರದರ್ಶನ ನೀಡಿ ಎದುರಾಳಿಯ ರನ್ ಓಟಕ್ಕೆ ಕಡಿವಾಣ ಹಾಕಿದ್ದಲ್ಲದೆ, ಇನ್ನುಳಿದ ೩ ವಿಕೆಟ್‌ಗಳನ್ನು ಉರುಳಿಸಿತು. ಅಂತಿಮವಾಗಿ ಬಾಳಡಿ ತಂಡ ತನ್ನೆಲ್ಲ ವಿಕೆಟ್ ಕಳೆದುಕೊಂಡು 65 ರನ್‌ಗಳನ್ನು ಗಳಿಸಿತು.

ಬಾಳಡಿ ತಂಡ ನೀಡಿದ 66 ರನ್‌ಗಳ ಗೆಲುವಿನ ಗುರಿಯನ್ನು ಮುಂದಿಟ್ಟುಕೊಂಡು ಮೈದಾನಕ್ಕಿಳಿದ ಪೋರೆ ಕುಂಜಿಲನ ತಂಡದ ಆಟಗಾರರು, ಬಾಳಡಿ ತಂಡ ಅತ್ಯಮೋಘ ಬೌಲಿಂಗ್ ಪ್ರದರ್ಶನದೆದುರು ರನ್ ಗಳಿಸಲು ತಿಣುಕಾಡಿ ನಿರಂತರವಾಗಿ ತನ್ನ ವಿಕೆಟ್‌ಗಳನ್ನು ಕಳೆದುಕೊಳ್ಳುತ್ತಾ ಸಾಗಿತು. ಈ ನಡುವೆಯೇ ಪೋರೆ ಕುಂಜಿಲನ ಅರುಣ್ ಅವರು ವಿಕೆಟ್‌ನ ಒಂದು ಬದಿಯಲ್ಲಿ 21 ಬಾಲ್‌ಗಳನ್ನು ಎದುರಿಸಿ, ಅಮೂಲ್ಯ 20 ರನ್‌ಗಳನ್ನು ಗಳಿಸಿದರಲ್ಲದೆ, ಹೆಬ್ಬಂಡೆಯಾಗಿ ಬಾಳಡಿ ತಂಡವನ್ನು ಕಾಡಿದರು. ಇದರೊಂದಿಗೆ ಪೋರೆ ಕುಂಜಿಲನ ತಂಡದ ನಾಯಕ ಪ್ರಶಾಂತ್ ಅವರು ಅರುಣ್ ಅವರಿಗೆ ಉತ್ತಮ ಬೆಂಬಲ ನೀಡಿದುದಲ್ಲದೆ, ಅಮೂಲ್ಯ 16 ರನ್‌ಗಳನ್ನು ಗಳಿಸಿ, ತಂಡದ ಗೆಲುವಿನ ಆಶಯವನ್ನು ಜೀವಂತವಾಗಿರಿಸಿದರು.

ಅತ್ಯುತ್ತಮವಾಗಿ ಆಡುತ್ತಿದ್ದ ಅರುಣ್ ಹಾಗೂ ಪ್ರಶಾಂತ್ ಅವರು ಸಲ್ಲದ ಹೊಡೆತವೊಂದಕ್ಕೆ ಪ್ರಯತ್ನಿಸಿ ವಿಕೆಟ್ ಕೈಚೆಲ್ಲುವುದರೊಂದಿಗೆ ಪೋರೆ ಕುಂಜಿಲನ ತಂಡದ ಪ್ರತಿ ಹೋರಾಟ ಮಂಕಾಯಿತು. ಪಂದ್ಯದ ಕೊನೆಯ ಓವರ್‌ಗಳಲ್ಲಿ ಪ್ರೇಕ್ಷಕರನ್ನು ತುದಿಗಾಲಿನಲ್ಲಿ ನಿಲ್ಲಿಸುವ ಆಟದ ಪ್ರದರ್ಶನ ಕಂಡುಬಂತು. ಪೋರೆ ಕುಂಜಿಲನ ತಂಡಕ್ಕೆ 13 ಬಾಲ್‌ಗಳಲ್ಲಿ 15 ರನ್ ಗಳಿಸುವ ಗುರಿ ಕೊನೆಯ ಓವರ್‌ಗಳಲ್ಲಿ ಎದುರಾಯಿತು. ಈ ಒತ್ತಡವನ್ನು ನಿಭಾಯಿಸಲಾಗದ ಪೋರೆ ಕುಂಜಿಲನ ತಂಡದ ಕೊನೆಯ ಹಂತದ ಬ್ಯಾಟ್ಸ್‌ಮನ್‌ಗಳು ತಮ್ಮ ವಿಕೆಟ್‌ಗಳನ್ನು ಎದುರಾಳಿಗೊಪ್ಪಿಸಿ ಸೋಲನ್ನು ಎದುರುಗೊಂಡಿತು. 14.5 ಓವರ್‌ಗಳಲ್ಲಿ ಪೋರೆ ಕುಂಜಿಲನ ತಂಡ 62 ರನ್‌ಗಳಿಸಿ ವೀರೋಚಿತ ಸೋಲಿಗೆ ಶರಣಾಯಿತು.

## ಸೆಮಿಫೈನಲ್

ಅಂದು ಬೆಳಿಗ್ಗೆ ನಡೆದ ದ್ವಿತೀಯ ಸೆಮಿಫೈನಲ್ ಪಂದ್ಯವೊಂದರಲ್ಲಿ ಬಾಳಡಿ ತಂಡ 13 ರನ್‌ಗಳ ಅಂತರದಿಂದ ಪರ್ಲಕೋಟಿ ತಂಡವನ್ನು ಪರಾಜಯಗೊಳಿಸಿ, ಅಂತಿಮ ಹಂತದ ತನ್ನ ಪಾಲ್ಗೊಳ್ಳುವಿಕೆಯನ್ನು ಖಾತ್ರಿಪಡಿಸಿಕೊಂಡಿತು. ಮೊದಲು ಬ್ಯಾಟ್ ಮಾಡಿದ ಬಾಳಡಿ ತಂಡ, ರವಿ ಅವರ 13 ರನ್‌ಗಳ ನೆರವಿನಿಂದ ನಿಗಧಿತ ಓವರ್‌ಗಳಲ್ಲಿ 61 ರನ್‌ಗಳನ್ನು ಗಳಿಸಿತು. ಇದಕ್ಕುತ್ತರವಾಗಿ ಪರ್ಲಕೋಟಿ ತಂಡ ೪೮ ರನ್‌ಗಳಲ್ಲಿ ತನ್ನೆಲ್ಲ ವಿಕೆಟ್ ಕಳೆದುಕೊಂಡು ಸೋಲನ್ನನುಭವಿಸಿತು. ತಂಡದ ಪರವಾಗಿ ತಿರುಪತಿ ಅವರು ಗರಿಷ್ಠ 12 ರನ್ ಗಳಿಸಿದರೆ, ಬಾಳಡಿ ತಂಡದ ಮಧು ಅವರು ತಮ್ಮ ಬೌಲಿಂಗ್‌ನಲ್ಲಿ 4 ವಿಕೆಟ್‌ಗಳನ್ನು ಪಡೆದುಕೊಂಡು ತಂಡದ ಗೆಲುವಿನ ರೂವಾರಿಯೆನಿಸಿಕೊಂಡರು.

ಕುಲ್ಲಚನ ದಿನೇಶ್, ಕಟ್ಟೆಮನೆ ಸೋನಾ ರಾಮಚಂದ್ರ, ಸೆಟ್ಟಿಜನ ಭಾನು ಪ್ರಕಾಶ್ ಅವರು ಅತ್ಯುತ್ತಮ ವೀಕ್ಷಕ ವಿವರಣೆಯನ್ನು ನೀಡಿ, ಸರ್ವರ ಮೆಚ್ಚುಗೆಗೆ ಪಾತ್ರರಾದರು.

## ಬಹುಮಾನ ವಿತರಣೆ

ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ತೋಟಂಬೈಲು ದಿವಂಗತ ರಾಘವೇಂದ್ರ ಅವರ ಜ್ಞಾಪಕಾರ್ಥ ಅವರ ಕುಟುಂಬಸ್ಥರು ನೀಡಿದ ಆಕರ್ಷಕ ಟ್ರೋಫಿಯನ್ನು, ತೋಟಂಬೈಲು ಪ್ರದೀಪ್ ಮತ್ತು ತುಂತಜೆ ಗಣೇಶ್ ಅವರು ಪಂದ್ಯಾವಳಿ ವಿಜೇತ ಬಾಳಡಿ ತಂಡಕ್ಕೆ ಪ್ರಧಾನ ಮಾಡಿದರು. ವೀರೋಚಿತ ಸೋಲಿಗೆ ಶರಣಾದ ಪೋರೆ ಕುಂಜಿಲನ ತಂಡಕ್ಕೆ, ದಂಬೆಕೋಡಿ ಸುಬ್ರಾಯ ದಂಪತಿಗಳ ಜ್ಞಾಪಕಾರ್ಥ ಅವರ ಪುತ್ರ ಮಾಜಿ ಶಾಸಕ ದಂಬೆಕೋಡಿ ಎಸ್. ಮಾದಪ್ಪ ಹಾಗೂ ದೇವಿ ಪ್ರಸಾದ್ ಅವರು ಆಕರ್ಷಕ ಟ್ರೋಫಿಯನ್ನು ನೀಡಿದರು.

ಇದೇ ಸಂದರ್ಭ ಪಂದ್ಯಾವಳಿಯ ಆಲ್ ರೌಂಡರ್ ಆಗಿ ಪರ್ಲಕೋಟಿ ತಂಡದ ಗಿರೀಶ್ ಅವರನ್ನು ಪುರಸ್ಕರಿಸಲಾಯಿತು. ಪಂದ್ಯಾವಳಿ ಪುರುಷೋತ್ತಮರಾಗಿ ಪೋರೆಕುಂಜಿಲನ ಪ್ರಶಾಂತ್ ಹಾಗೂ ಅತ್ಯುತ್ತಮ ಆಟದ ಪ್ರದರ್ಶನ ನೀಡಿದ ಆಟಗಾರನಾಗಿ ಬಾಳಡಿ ಮಧು ಅವರನ್ನು ಗೌರವಿಸಲಾಯಿತು.

## ಸಮಾರೋಪ ಸಮಾರಂಭ

ಎನ್. ಎಸ್. ದೇವಿಪ್ರಸಾದ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದ ಗೌಡ ಸಾಂಸ್ಕೃತಿಕ ಅಕಾಡೆಮಿಯ ಅಧ್ಯಕ್ಷರಾದ ತುಂತಜೆ ಗಣೇಶ್ ಅವರು ಮಾತನಾಡುತ್ತಾ, ಇಂತಹ ಕ್ರೀಡಾ ಕೂಟಗಳು ಯುವಜನಾಂಗವನ್ನು ಕ್ರಿಯಾಶೀಲರನ್ನಾಗಿ ಮಾಡಲು ಸಹಕರಿಸುತ್ತದೆ. ಈಗಾಗಲೇ ಗೌಡ ಅಕಾಡೆಮಿ ಗೌಡ ಕುಟುಂಬಗಳ ನಡುವಿನ ಹಗ್ಗ-ಜಗ್ಗಾಟ ಸ್ಪರ್ಧೆ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸುತ್ತಾ ಬಂದಿದೆ. ಇಂತಹ ಕಾರ್ಯಕ್ರಮಗಳು ಕುಟುಂಬಗಳ ನಡುವೆ ಸ್ನೇಹತ್ವವನ್ನು ಮೂಡಿಸಲು ಅಂತೆಯೇ ಪರಸ್ಪರರನ್ನು ಅರಿತುಕೊಳ್ಳಲು ನೆರವಾಗುತ್ತದೆ. ಇಂತಹ ಚಟುವಟಿಕೆಗಳೊಂದಿಗೆ ನಮ್ಮ ಭಾಷೆ, ಸಂಸ್ಕೃತಿಗಳನ್ನು ಬೆಳೆಸುವ ನಿಟ್ಟಿನಲ್ಲೂ ಖಂಡಿತ ಶ್ರಮ ವಹಿಸಬೇಕೆಂದು ಕರೆ ನೀಡಿದರು.

## "ಸೆಳೆತ" : ಹಿಂದಿನ ಸಂಚಿಕೆಯಿಂದ

–ಬಾರಿಯಂಡ ಜೋಯಪ್ಪ
ಉಪನ್ಯಾಸಕರು, ಮದೆ.

ಅವ್ವ ನಮ್ಮ ನಡೆನುಡಿಯಲ್ಲಿ ಸುಖ ಕಾಣಬಯಸಿದವಳು. ಮಕ್ಕಳು ಒಮ್ಮೆ ದೊಡ್ಡವರಾಗಿಬಿಟ್ಟರೆ ಸಾಕಪ್ಪಾ ಎಂದು ಹಂಬಲಿಸಿದವಳು.

ನಾನು ಬೇಗನೆ ದೊಡ್ಡವನಾಗಬೇಕು. ನಾನೊಬ್ಬನೇ ಗದ್ದೆಯಲ್ಲಿ ಮಲಗಬೇಕು. ಅವ್ವ-ಅಕ್ಕ ಇವರನ್ನು ಇಲ್ಲಿ ಮಲಗಲು ಬಿಡಬಾರದು. ಬೇಟೆ ಕಲಿಯಬೇಕು, ಕೋವಿ ಇಟ್ಟುಕೊಳ್ಳಬೇಕು. ಹಿಂಸೆ ಕೊಡುವ ಪ್ರಾಣಿಗಳನ್ನು ಕೊಲ್ಲಬೇಕು-ಇವು ನನ್ನ ಮನಸ್ಸನ್ನು ಸದಾ ಕೊರೆಯುತ್ತಿದ್ದ ವಿಚಾರಗಳು. ಬರುಬರುತ್ತಾ ಶಾಲೆಯ ಬಗ್ಗೆ ಸ್ವಲ್ಪ ತಾತ್ಸಾರವನ್ನೇ ತೋರುತ್ತಿದ್ದೆ. ಕೆಲವು ದಿನ ಶಾಲೆಗೆ ಚಕ್ಕರ್ ಹೊಡೆಯುತ್ತಿದ್ದೆ. ಅಂಥ ದಿನಗಳಲ್ಲಿ 'ಕಪಿಪಾರ' ನನ್ನ ಪಾಲಿನ ಕೆಲಸ. ಒಂದು ದಿನ ಗದ್ದೆಗೆ ಬಂದ ಕಪಿಗಳನ್ನು ಬಿಲ್ಲು ಕಲ್ಲಿನ ಹೊಡೆತದಿಂದ ಓಡಿಸಿದೆ. ಮಜ್ಜಿಗೆ ಕುಡಿಯಲೆಂದು ಮನೆಗೆ ಬಂದೆ. ಅವ್ವ ಮನೆಯಲ್ಲಿರಲಿಲ್ಲ. ನೀರಿಗೋ, ಸೌದೆಗೋ ಹೋಗಿದ್ದಿರಬೇಕು. ಹೀಗೆ ಮನೆಗೆ ಬರುತ್ತಾ ಪೊಪ್ಪಾಯಿ ಮರದತ್ತ ನೋಡಿದೆ. ಮರ ಅಲುಗಾಡುತ್ತಿತ್ತು. ಒಂದರ ಹಿಂದೆ ಮತ್ತೊಂದು. ಹೀಗೆ ಸಾಲುಗಟ್ಟಿದ ವಾನರ ಸೇನೆ ! ಪೊಪ್ಪಾಯಿ ಮರ ಖಾಲಿ ! ಇನ್ನೊಂದೆರಡು ಕಪಿಗಳ ಕೈಯಲ್ಲಿ ಎಳೆ ಕುಂಬಳಕಾಯಿ. ನನಗೆಲ್ಲಿಲ್ಲದ ಸಿಟ್ಟು. ಡಾಗ್ ನಾಯಿಯನ್ನು ಚೂಬಿಟ್ಟೆ. ಬಿಲ್ಲುಕಲ್ಲಿನ ಹೊಡೆತ ಶುರುಮಾಡಿದೆ. "ಕಿರ್ರೋ ಮರ್ರೋ" ಅಂತ ಕೂಗಿಕೊಳ್ಳುತ್ತ ಅತ್ತಿತ್ತ ಹಾರಿ ಕಾಡಿನಲ್ಲಿ ಕಣ್ಮರೆಯಾದವು. ಮನೆಗೆ ಬಂದು ಮಜ್ಜಿಗೆ ಕುಡಿದು ಮತ್ತೆ ಗದ್ದೆಯತ್ತ ಓಡಿದೆ. ಅಲ್ಲೂ ಕಪಿಗಳೇ ! ಬತ್ತದ ಕದಿರನ್ನು ಕಚ್ಚಿಕೊಳ್ಳುತ್ತ - ಹಿಡಿದುಕೊಳ್ಳುತ್ತ ಓಡಾಡುತ್ತಿದ್ದವು. ನಾನು ಬೊಬ್ಬೆ ಹಾಕಿಕೊಂಡೇ ಓಡಿದೆ. ಜೊತೆಗೆ ನಾಯಿಯೂ ಇತ್ತು. ನಾಯಿಯ ಬೊಗಳುವಿಕೆ ಮತ್ತು ನನ್ನ ಬೊಬ್ಬೆಗೆ ತಬ್ಬಿಬ್ಬಾದ ಒಂದು ಕಪಿ ಗದ್ದೆ ಬದಿಯಲ್ಲಿದ್ದ ಒಂಟಿ ಮರದಲ್ಲಿ ಸಿಕ್ಕಿಕೊಂಡಿತು. ಆಹಾ! ಸಿಕ್ಕಿದೆಯಾ ? 'ನಿನ್ನ ಮಾತ್ರ ಬಿಡಕಿಲ್ಲ' ಎನ್ನುತ್ತ ಬಿಲ್ಲುಕಲ್ಲನ್ನು ಎಳೆದೆಳೆದು ಬಿಟ್ಟೆ. ಒಂದು ಏಟು ಬಡಿಯಿತು. ನಾನು ಕುಣಿದಾಡಿ ಬಿಟ್ಟೆ. ಆ ಕಪಿಗೆ ಸಿಟ್ಟು ಹೆಚ್ಚಾಯಿತಲ್ಲ ! 'ಮೊರ್‌ಮೊರ್' ಅನ್ನುತ್ತ ನನ್ನನ್ನೇ ನೋಡುತ್ತ ರೆಂಬೆಯಿಂದ ರೆಂಬೆಗೆ ಇಳಿಯತೊಡಗಿತು. ನಿಂತು ಬಗ್ಗಿ ನನ್ನನ್ನೇ ನೋಡಿ 'ಮೊರ್' ಅಂದಿತು. ರೆಂಬೆಯೊಂದನ್ನು ಬಲವಾಗಿ ಹಿಡಿದು ಅಲುಗಿಸಿತು. ನನ್ನ ಮೈಯನ್ನು ಇದು ಪರಚದೆ ಬಿಡದೆಂದು ನನಗೆ ಗ್ಯಾರಂಟಿ ಯಾಯಿತು. ನನ್ನ ಮೈ ರೋಮ ಎದ್ದು ನಿಂತಿತು ಚಳಿಯಾದಂತೆ ಆಗತೊಡಗಿತು. ಆದರೂ ಬಿಲ್ಲು ಕಲ್ಲಿನ ಹೊಡೆತವನ್ನು ನಿಲ್ಲಿಸಿರಲಿಲ್ಲ.

ಆದರೆ ನನ್ನ ಆ ಯಾವೊಂದು ಹೊಡೆತದಲ್ಲೂ ತೀಕ್ಷ್ಣತೆ ಇರಲಿಲ್ಲ. ಬಿಲ್ಲನ್ನು ನೆಲದ ಮೇಲಿಟ್ಟು ಒಂದು ಬಡಿಗೆಯನ್ನು ಅದರತ್ತ ಎಸೆದೆ. ಕಪಿ ಪುನಃ ನನ್ನನ್ನೇ ಇಣುಕಿ ನೋಡಿ 'ಮೊರ್' ಅಂದಿತು. ನನ್ನ ಗರ್ಭ ನಡುಗಿದಂತಾಯಿತು. ಇನ್ನೇನು ಕಪಿ ಮರದಿಂದ ನೆಲಕ್ಕೆ ಜಿಗಿಯಬೇಕೆನ್ನುವಷ್ಟರಲ್ಲಿ ನಾಯಿ ಅದರತ್ತಲೇ ಬೊಗಳಿ ಹಾರಿತು. ಕಪಿ ಸರಸರನೆ ಮೇಲೇರಿತು. ನನಗೆ ಧೈರ್ಯ ಬಂತು. ಕೂಡಲೆ ನೆಲದಲ್ಲಿದ್ದ ಬಿಲ್ಲನ್ನು ಎತ್ತಿ ಮಾಮೂಲಿ ಹೊಡೆತ ಕೊಡತೊಡಗಿದೆ. ಅದು ಮೇಲೆ ಮೇಲೆ ಬಹು ಮೇಲೆ ಹೋಗಿ ಸೊಪ್ಪನ್ನು ತನ್ನ ತೊಡೆ ಸಂದಿಗೆ ಸೇರಿಸಿ ಮರೆ ಮಾಡಿಕೊಂಡು ನನಗೆ ಬೆನ್ನು ಹಾಕಿ ಕುಳಿತ ಕಪಿ 'ಜಪ್ಪಯ್ಯ' ಅಂದರೂ ಅಲುಗಾಡಲಿಲ್ಲ. ಉಂಡೆಯೆಲ್ಲಾ ಖಾಲಿಯಾದವು. ನನಗೂ ಆಯಾಸವಾಗಿತ್ತು. 'ನಿನ್ನ ದೊಂಡೆ ಕಟ್ಟಲಿ' ಎಂದು ಹಿಡಿ ಶಾಪ ಹಾಕಿ ಸುಮ್ಮಾದೆ. ಅಟ್ಟಪಾಳಿಯತ್ತ ಹೋದೆ. ಕುಂಟೆ ಇರದ್ದರಿಂದ ಅದನ್ನು ಕತ್ತರಿಸಲು ಕೊಡಲಿ ತಕ್ಕೊಂಡು ಕಾಡಿನತ್ತ ನುಗ್ಗಿದೆ.

ಮಾರನೆಯ ದಿನ ಶಾಲೆಗೆ ಹೋದೆ. ಶಾಲೆಗೆ ಹೋಗುವಾಗ ಬರುವಾಗ ಗೆಳೆಯರೊಡನೆ ಬೇಟೆಯ ಬಗ್ಗೆಯೇ ಚರ್ಚೆ ನಡೆಯುತ್ತಿತ್ತು. ಕೆಲವರು ಗದ್ದೆಯಲ್ಲಿ ಹಂದಿಗೆ ಗುಂಡು ಹೊಡೆದ ಸುದ್ದಿ, ಕಾಡಿನಲ್ಲಿ ಒಳಿ ಕುಳಿತು ಕಡವೆ ಹೊಡೆದ ಕಥೆ ನಮ್ಮ ಮಾತಿಗೆ ವಸ್ತುಗಳಾಗಿದ್ದವು. ಒಂದು ದಿನ ಗೆಳೆಯ ಗಣೇಶನ ಮನೆಗೆ ಹೋದೆ. ಅವನಲ್ಲಿ ಒಂದು ತೋಟಾ ಕೋವಿ ಇತ್ತು. ಗಣೇಶ ಆ ಕೋವಿಯನ್ನು ಎತ್ತಿ ಗುರಿ ಹಿಡಿಯುವ ರೀತಿಯನ್ನು ತೋರಿಸಿದ. 'ನಾನೂ ಹಾಗೆ ಮಾಡುತ್ತೇನೆ ಕೊಡೋ' ಎಂದೆ. ಅವನು ನನ್ನ ಕೈಗೆ ಕೋವಿಯನ್ನು ಕೊಟ್ಟ. ನನ್ನ ಕೈಗೆ ಕೋವಿ ಬಂದಾಗಲೇ ಗೊತ್ತು-ಇದೊಂದು ಕಬ್ಬಿಣದ ತುಂಡು, ಇದನ್ನು ಹೇಗೆ ಎತ್ತಿಕೊಳ್ಳಲಿ-ಎಂದು. ಆ ಭಾರದ ಕೋವಿ ನನ್ನ ಕೈಗೆ ಬಂದಾಗ ನಾನು ಬೇಟೆಯಾಡುವ ಕನಸು ದೂರವೇ ಉಳಿಯಿತು. ನನ್ನ ಕೈಯಿಂದ ಖಂಡಿತ ಬೇಟೆ ಸಾಧ್ಯವಿಲ್ಲವೆಂದೇ ಅಂದು ಭಾವಿಸಿಕೊಂಡೆ.

---

ಮತ್ತೋರ್ವ ಮುಖ್ಯ ಅತಿಥಿ ಮಾಜೀ ಶಾಸಕ ಡಿ.ಎಸ್. ಮಾದಪ್ಪ ಅವರು ಮಾತನಾಡುತ್ತಾ, ಕ್ರೀಡೆಯ ವಿವಿಧ ವಿಭಾಗಗಳಲ್ಲಿ ಕೊಡಗಿನ ಮಂದಿ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಅಮೋಘ ಸಾಧನೆ ಮಾಡಿದ್ದಾರೆ. ಆದರೆ ಕ್ರಿಕೆಟ್‌ನಲ್ಲಿ ಅಂತಹ ಸಾಧನೆ ಮೂಡಿ ಬಂದಿಲ್ಲ. ಜಿಲ್ಲೆಯ ಬೆಳ್ಳಪ್ಪ ಅವರು ರಣಜಿ ಕ್ರಿಕೆಟ್ ಪಂದ್ಯಾವಳಿಯಲ್ಲಿ ಪಾಲ್ಗೊಂಡಿರುವುದೇ ಈ ಕ್ರೀಡೆಯಲ್ಲಿನ ಜಿಲ್ಲೆಯ ಗರಿಷ್ಠ ಸಾಧನೆಯಾಗಿದೆ ಎಂದು ಅಭಿಪ್ರಾಯಿಸಿದರು. ಇಂತಹ ಕ್ರೀಡಾ ಚಟುವಟಿಕೆಗಳು ವಿವಿಧ ವಿಭಾಗಗಳಲ್ಲಿ ನೆಲೆಸಿರುವ ಗೌಡ ಕುಟುಂಬಗಳನ್ನು ಒಂದೇ ಸೂರಿನಡಿಗೆ ತರುವ ಶ್ಲಾಘನೀಯ ಕಾರ್ಯವನ್ನು ಮಾಡುವಲ್ಲಿ ಯಶಸ್ವಿಯಾಗಿದೆ. ಇಂತಹ ಕಾರ್ಯಕ್ರಮಗಳ ಮೂಲಕ ವಿವಿಧ ಭಾಗಗಳಲ್ಲಿ ನೆಲೆಸಿರುವ ಕುಟುಂಬಗಳು ಒಂದೆಡೆ ಕಲೆತು ಪರಸ್ಪರರನ್ನು ಅರಿತು ಮುನ್ನಡೆಯಲು ಸಾಧ್ಯವೆಂದು ಅಭಿಪ್ರಾಯಿಸಿದರು.

### ಸನ್ಮಾನ

ಇದೇ ಸಮಾರಂಭದಲ್ಲಿ ಇತ್ತೀಚೆಗೆ ಪತ್ರಿಕಾ ಕ್ಷೇತ್ರದಲ್ಲಿನ ತಮ್ಮ ಅತ್ಯುತ್ತಮ ಸಾಧನೆಗಾಗಿ ಜಿಲ್ಲಾ ಮಟ್ಟದ ಪ್ರಶಸ್ತಿ ಪಡೆದ ಅಂಚೆ ಮನೆ ಸುಧಿ ಹಾಗೂ ಕರಾವಳಿ ಕ್ರಿಕೆಟ್ ಕ್ಲಬ್‌ನೊಂದಿಗೆ ಇಂಗ್ಲೆಂಡಿಗೆ ತೆರಳಲಿರುವ ಪೋರೆಯನ ಅರುಣ್ ಮಾದಪ್ಪ ಅವರನ್ನು ಗೌರವಿಸಲಾಯಿತು.

ಆರಂಭದಲ್ಲಿ ಬಾಳಡಿ ಅಖಿಲ್ ಪ್ರಾರ್ಥನೆ ನಡೆಸಿದರೆ, ಕುಲ್ಲಚನ ದಿನೇಶ್ ಸರ್ವರನ್ನೂ ಸ್ವಾಗತಿಸಿ, ಕೊನೆಯಲ್ಲಿ ವಂದಿಸಿದರು.

(ಚಿತ್ರ ವರದಿ : ಅಂಚೆಮನೆ ಸುಧಿ)

---

ಅಣ್ಣಯ್ಯ ನಮ್ಮ ಸಂಬಂಧಿ. ದೂರದಲ್ಲಿ ಅವನ ಮನೆ, ಗದ್ದೆ, ರಾತ್ರಿ ಅವನೂ ಅವನ ಗದ್ದೆಯಲ್ಲಿ ಮಲಗುತ್ತಿದ್ದ. ನಮ್ಮ ಆಪತ್ಕಾಲದ ಬಂಧು ಎಂದು ಅವನನ್ನು ಕರೆದರೂ ತಪ್ಪಲ್ಲ. ಅದೆಷ್ಟೋ ರಾತ್ರಿ ನಾವು ಆನೆಯನ್ನು ಓಡಿಸುವ ಸದ್ದಿಗೆ ನಮ್ಮ ಬಳಿಗೆ ಬಂದು ಆನೆಗೆ ಬೆದರು ಗುಂಡು ಹೊಡೆದು ನಮಗೆ ಧೈರ್ಯ ಹೇಳಿ ಹೋಗುತ್ತಿದ್ದ. ಕೆಲವೊಮ್ಮೆ ನಾವೇ ರಾತ್ರಿ ಅವನನ್ನು ಕೂಗಿ ಕರೆಯುತ್ತಿದ್ದೆವು. ಆತ ಎಷ್ಟು ಪ್ರಾಮಾಣಿಕನಾಗಿದ್ದನೆಂದರೆ ನಾವು ಮೂರು ನಾಲ್ಕು ಬಾರಿ ಕೂಗಿದರೂ ಸಾಕು "ಓ ಬಂದೇ...." ಎನ್ನುತ್ತ ಓಡಿ ಬಂದು ಸಹಾಯ ಮಾಡುತ್ತಿದ್ದ.

ಅಂದು ಹುತ್ರಿ ಹಬ್ಬ, ನವೆಂಬರ್ ತಿಂಗಳಲ್ಲೇ ಆ ವರ್ಷ ಹಬ್ಬವಿತ್ತು. ಅದು 'ಎಳೆ' ಹುತ್ರಿ. ಡಿಸೆಂಬರ್ ತಿಂಗಳಿನಲ್ಲಿ ಬಂದರೆ ಆ ಹುತ್ರಿಯನ್ನು 'ಬೆಳೆದ' ಹುತ್ರಿ ಎನ್ನುತ್ತಿದ್ದರು. ಊರವರು ಅವರವರ ಗದ್ದೆಯಲ್ಲೇ "ಪೊಲಿ ಪೊಲಿ ಪೊಲಿದೇವಾ" ಎನ್ನುತ್ತ ಆ ವರ್ಷದ ಮೊದಲ ಕೊಯ್ಲನ್ನು ಶುರು ಮಾಡುತ್ತಿದ್ದರು. ಪಟಾಕಿಗಳು ಸಿಡಿಯುತ್ತಿದ್ದವು. ಸುತ್ತ ಮುತ್ತೆಲ್ಲಾ ಢಂ, ಢಂ ಸದ್ದೇ. ನಾನೂ ಅಪ್ಪನನ್ನು ರಂದಿ ಮಾಡಿ ಒಂದೆರಡು ರೂಪಾಯಿಗೆ ಪಟಾಕಿ ತಂದಿದ್ದೆ ! ಅದನ್ನು ಮನೆಯಲ್ಲಿ ಸಿಡಿಸುವಂತಿಲ್ಲ. ರಾತ್ರಿ ಗದ್ದೆ ಖರ್ಚಿಗೆ ಇರಲಿ ಅಂತ ಹಾಗೇ ಇಟ್ಟುಕೊಂಡಿದ್ದೆ. ಊರವರು ಸಿಡಿಸುವ ಪಟಾಕಿ ಸದ್ದಿನಿಂದಲೇ ಖುಷಿ ಪಡುತ್ತಿದ್ದೆ, ಅಷ್ಟೆ. ಅದಿರಲಿ, ಅವೊತ್ತು ತಂಬಿಟ್ಟು, ಹುತ್ರಿ ಗೆಣಸು ತಿಂದು ಗದ್ದೆಯತ್ತ ಹೊರಟೆವು. ತಿಂಗಳು ಬೆಳಕು ಚೆನ್ನಾಗಿತ್ತು. ಲಾಟೀನು ಹೊತ್ತಿಸಿರಲಿಲ್ಲ. ಪಟಾಕಿ ಜೇಬಲ್ಲಿತ್ತು. ಸೀದಾ ಗದ್ದೆಯತ್ತ ಹೋಗದೆ ದಾರಿಯಲ್ಲೇ ನಿಂತು ಗದ್ದೆ ಕಡೆಗಿನ ಸದ್ದನ್ನು ಆಲಿಸಿದೆವು. ದೀರ್ಘವಾಗಿ ಉಸಿರೆಳೆವ ಸದ್ದು ಕೇಳಿ ಬಂತು. ಗದ್ದೆಯ ನಡುವೆ ಒಂದು ಬೆಟ್ಟ ! 'ಇದ್ರ ಹೊಟ್ಟೆಗೆ ಬೆಂಕಿ ಹಾಕ, ಗದ್ದೆನೆಲ್ಲಾ ಮಟ್ಟ ಮಾಡ್ತು' ಎನ್ನುತ್ತ ಅವ್ವ "ಅದ್ದಾ ಏಯ್ ಏಯ್" ಅಂತ ಬೊಬ್ಬೆ ಹಾಕಿದಳು. ನಾನು ಶಿಳ್ಳೆ ಹೊಡೆದು ಬೊಬ್ಬೆ ಹಾಕಿದೆ. ಇದೇ ಸಂದರ್ಭ ಎನ್ನುತ್ತ ಪಟಾಕಿಗೆ ಬೆಂಕಿಯಿಟ್ಟೆ. 'ಢಂ' ಎಂದು ಸಿಡಿಯಿತು. ಆನೆ ಮೈಂಟೇ ಮಾಡಲಿಲ್ಲ. ಮತ್ತೊಂದು ಪಟಾಕಿಗೆ ಬೆಂಕಿಯಿಟ್ಟೆ. 'ಟುಸ್ಸೊ' ಎನ್ನುತ್ತ ಸತ್ತೇ ಹೋಯ್ತು. ಆನೆ ತನ್ನ ಮೇವನ್ನು ಮಾಡುತ್ತಲೇ ಇತ್ತು. ಇನ್ನು ಅಣ್ಣಯ್ಯನೇ ಗತಿ ಎನ್ನುತ್ತ ಅವ್ವ "ಅಣ್ಣಯ್ಯ ಅಣ್ಣಯ್ಯ ಕೂ.... ಆನೆ ಆನೆ ಕೂ.... ಒಮ್ಮೆ ಬಾ...." ಎಂದು ಹಲವಾರು ಬಾರಿ ಕೂಗಿದಳು. ಸ್ವಲ್ಪ ಹೊತ್ತಿನಲ್ಲಿ ಅವನು ಕೋವಿಯೊಡನೆ ರೆಡಿ ! ಅವನು ಆನೆ ಇರುವ ಗದ್ದೆಯತ್ತ ನಡೆದ. ನಾನು, ಅಕ್ಕಯ್ಯ ಇಬ್ಬರೂ ಅವನ ಹಿಂದೆ ನಡೆದೆವು. ನಾವು ಅವನ ಹಿಂದೆ ಇರುವುದು ಅವನಿಗೆ ಗೊತ್ತಿರಲಿಲ್ಲ. ನನಗಂತೂ ಅವನು ಗುಂಡು ಹೊಡೆವುದನ್ನು ನೋಡುವ ತವಕ. ಒಂದೆಡೆ ಮರೆಯಾಗಿ ನಿಂತು ಆನೆಯ ಕಡೆಗೆ 'ಬೆದರು ಗುಂಡು' ಹೊಡೆದ. ಆನೆ ಭೂಮಿಯೇ ಸೀಳಿಹೋಗುವಂತೆ ಘೀಳಿಟ್ಟಿತು. ನಾಯಿ ಕಂಯ್‌ಗುಡುವಂತೆ 'ಕಂಯ್ ಕಂಯ್' ಅಂತ ಕೂಗಿಕೊಂಡು ಇತ್ತಲೇ ಬರತೊಡಗಿತು. ಅಣ್ಣಯ್ಯ ಮತ್ತೊಂದು ಗುಂಡು ಹೊಡೆಯಲಿಲ್ಲ. ಹಿಂದಕ್ಕೆ ಓಡಿ ಬರುತ್ತಿದ್ದ. ದಾರಿಯಲ್ಲಿ ನಾವಿಬ್ಬರು ನಿಂತದನ್ನು ಕಂಡು "ಅಯ್ಯಯ್ಯೋ.... ನಿಮ್ಮ ನಿಮ್ಮಾ.... ಓಡಿ ಓಡಿ" ಎನ್ನುತ್ತ ನಮ್ಮನ್ನು ದರದರ ಎಳೆದು ಕೊಂಡು ಓಡಿದ. ಆನೆ ಮತ್ತೊಮ್ಮೆ ಘೀಳಿಟ್ಟು ತೇಗದ ತೋಪಿನತ್ತ ನಡೆಯಿತು. ಸಧ್ಯ ನಾವಂತೂ ಪಾರಾಗಿದ್ದೆವು.

ಬೇಸಗೆಯ ರಜೆಯ ಕಾಲ. ಗಣೇಶನು ಕೊಕ್ಕರೆಗೆ ಗುಂಡು ಹೊಡೆದು ಬೀಳಿಸಿದ್ದ ಸುದ್ದಿ ನನ್ನ ಕಿವಿಗೂ ಬಿತ್ತು. ಅದು ಅವನ ಮೊದಲ ಬೇಟೆಯಾಗಿತ್ತು. ಆ ಸುದ್ದಿ ಕೇಳಿದಾಗ ನಾನಂತೂ ಹುಚ್ಚನಂತಾದೆ. ನಾನು ಅವನ ಹಿಂದೆ ಮುಂದೆ ತಿರುಗತೊಡಗಿದೆ. ತೋಟಾವನ್ನು ತುಂಬಿಸುವುದನ್ನು ಹೇಳಿಕೊಟ್ಟ. ಅವನ ಕೋವಿಯನ್ನು ಎತ್ತುವಷ್ಟು ತಾಕತ್ತು ಆಗ ನನಗಿತ್ತು. ಆದರೆ ಅವನದು ವಿಚಿತ್ರ ಕೋವಿ. ಅವನ ಅಪ್ಪ ಒಮ್ಮೆ ಆ ಕೋವಿಯನ್ನು ಹೆಗಲ ಮೇಲಿಟ್ಟು ನಡೆಯುತ್ತಿದ್ದಾಗ ಇದ್ದಕ್ಕಿದ್ದಂತೆ ಗುಂಡು ಸಿಡಿದಿತ್ತು. ಸಧ್ಯ ಅವನ ಹಿಂದೆ ಯಾರೂ ಇರಲಿಲ್ಲ. ಅಂಥ ತಲೆಕೆಟ್ಟ ಕೋವಿಯಲ್ಲಿ ನಾನು ಗುಂಡು ಕಲಿತದ್ದು. ಒಮ್ಮೆ ಒಂದು ಗೊದ್ದಂಬಟೆ ಮರದಲ್ಲಿ ಗಿಳಿಗಳು ಕುಳಿತಿದ್ದವು. ಮರದಲ್ಲಿ ಸೊಪ್ಪೇ ಇಲ್ಲ. ಬರೇ ಹಣ್ಣುಗಳು ಮತ್ತು ಹಕ್ಕಿಗಳು. ನಾನು ಕೋವಿಯನ್ನು ಎತ್ತಿದೆ. ಎದೆಗೆ ಒತ್ತಿ ಹಿಡಿದು ಗುರಿ ಹಿಡಿಯುತ್ತಿದ್ದೆ. ಆಗ ಕೋವಿ ಬಾಗಿ ನೆಲಮುಟ್ಟುತಿತ್ತು. ಮತ್ತೆ ಎತ್ತಿದೆ. ಮುಂಭಾರ ಹೆಚ್ಚಾದ್ದರಿಂದ ಅದು ಎತ್ತಿ ಬರುತ್ತಿರಲಿಲ್ಲ. ಅಂತೂ ಕಷ್ಟಪಟ್ಟು ಎತ್ತಿ ಹಿಡಿಯುತ್ತಿದ್ದೆ. ಅಷ್ಟರಲ್ಲಿ ಗಿಳಿಗಳೆಲ್ಲ ಹಾರಿ ಹೋದವು. ಹೀಗಾಯ್ತಲ್ಲಾ ಎಂದು ಅತ್ತಿತ್ತ ನೋಡುವಷ್ಟರಲ್ಲಿ ಮತ್ತೊಂದು ಗಿಳಿ ಹಿಂಡು ಬಂದು ಕುಳಿತಿತು. ಈಗಂತೂ ತುಟಿಕಚ್ಚಿ (ಅಂಬಟೆ ಕಚ್ಚಿ ಕೊಂಡು) ಕೊಂಡು ಕೋವಿಯನ್ನು ಎತ್ತಿದೆ. ಉಸಿರು ಬಿಗಿ ಹಿಡಿದೆ. ನನ್ನ ಎಡಗೈ ಭಾರ ಹೊರಲಾರದೆ ಗಡಗಡ ನಡುಗುತಿತ್ತು. ಯಾವ ಕಣ್ಣು ಮುಚ್ಚಿದೆನೋ ಯಾವುದನ್ನು ತೆರೆದೆನೊ. ಅಥವಾ ಎರಡು ಕಣ್ಣುಗಳನ್ನು ಮುಚ್ಚಿಕೊಂಡೆನೋ ಇಲ್ಲ ಯಾವುದನ್ನೂ ಮುಚ್ಚಲಿಲ್ಲವೊ ಅಂತೂ ಟ್ರಿಗರನ್ನು ಅದುಮಿದೆ. ಅದು ಲಟಕ್ ಅಂತ ಬಿದ್ದಿತೇ ಹೊರತು ಗುಂಡು ಸಿಡಿಯಲಿಲ್ಲ. ನಾವಿಬ್ಬರು ಕೂಡಿಕೊಂಡು ತುಂಬಿದ್ದ ತೋಟ ನಮಗೇ ಕೈಕೊಟ್ಟಿತ್ತು. 'ಇದಕ್ಕೇನು ಬಡಿಯಿತು ರೋಗ' ಎನ್ನುತ್ತ ಕೋವಿಯನ್ನು ಮುರಿದರೆ ತೋಟಾ ಜಿಗಿಯಲೇ ಇಲ್ಲ. ಕೋವಿಯಲ್ಲಿ ಸಿಕ್ಕಿಕೊಂಡ ತೋಟಾವನ್ನು ಈ ಕಡೆಯಿಂದ ಕೋಲು ಹಾಕಿ ಕುಟ್ಟಿ ಕುಟ್ಟಿ ಹೊರ ತೆಗೆದೆವು. ಅದೇ ತೋಟವನ್ನು ಬಿಚ್ಚಿ ಮತ್ತೊಮ್ಮೆ ಜಾಗ್ರತೆಯಿಂದ ತುಂಬಿದೆವು. ಅದೇ ಗೊದ್ದಂಬಟೆ ಮರದತ್ತ ಹೋದೆವು. ಗಿಳಿಗಳು 'ಚೀಂಪೀ' ಎನ್ನುತ್ತ ಅತ್ತಿತ್ತ ಹಾರಾಡಿ ಕೊಳ್ಳುತ್ತಿದ್ದವು. ನಾನು ಮೊದಲಿನಂತೆ ಕೋವಿ ಎತ್ತಿ ಹಿಡಿದೆ. ಕೈ ನಡುಗುತ್ತಲೇ ಇತ್ತು. ಟ್ರಿಗರನ್ನು ಅದುಮಿದೆ. ಗುಂಡಂತೂ ಸಿಡಿಯಿತು. ನನ್ನ ಎದೆಗೆ ಯಾರೋ ಒದ್ದಂತಾಯಿತು. ನನಗಾದ ನೋವನ್ನು ಗಣೇಶನೊಡನೆ ಹೇಳಲಿಲ್ಲ. ನಾನು ಹೊಡೆದ ಗುಂಡು ಯಾವ ಹಕ್ಕಿಗಾಗಲೀ ರೆಂಬೆಗಾಗಲೀ ಬಡಿದಿರಲಿಲ್ಲ. ಹಕ್ಕಿಗಳಿಗಿಂತ ಎಷ್ಟೋ ಕೆಳಗೆ ಗುಂಡು ಹಾರಿತ್ತು !

ಇನ್ನೊಮ್ಮೆ ನಾನೇಕೆ ಪ್ರಯತ್ನಿಸಬಾರದೆಂದು ಮತ್ತೆ ಅವನ ಹತ್ತಿರವೇ ಹೋದೆ. ದೂರದಲ್ಲಿ ಅಳಿಲುಗಳು 'ಚಿಕ್ ಚಿಕ್ ಚಿಂವ್ ಚಿಂವ್' ಎನ್ನುತ್ತ ಕೂಗುತ್ತಿದ್ದವು. ಕೋವಿಯೊಡನೆ ಅತ್ತ ಓಡಿದೆ. ಗುರಿ ಹಿಡಿದೆ. ಆಗಲೂ ನನ್ನ ಎಡಗೈ ನಡುಗುತಿತ್ತು. ನನಗೊಂದು ಉಪಾಯ ಹೊಳೆಯಿತು. ಒಂದು ಗಿಡದ ಕವಟೆಗೆ ಕೋವಿಯ ತುದಿಯನ್ನಿಟ್ಟೆ. ಇಷ್ಟು ಪೇಚಾಟವಾದರೂ ಅಳಿಲುಗಳು ಇಲ್ಲೇ ಇದ್ದವು. ಗುಂಡು ಹೊಡೆದೆ. ಎರಡೂ ಬಿದ್ದೇ ಬಿದ್ದವು. ನಾನಾಗ ಹುಲಿ ಹೊಡೆದ

ವಾಯುವ್ಯದಲ್ಲಿ - ಸೇರಿಸದಿದ್ದರೆ ಉತ್ತರಕ್ಕೆ ಲಾಭ ಬರುವುದೊಟ್ಟಿಗೆ

ಶೂರನಂತಾದೆ. ಅಪ್ಪನೊಡನೆ ಈ ವಿಜಯದ ಸುದ್ದಿಯನ್ನು ಮುಟ್ಟಿಸಿ ಸರಿಯಾಗಿ ಬಯ್ಸಿಕೊಂಡೆ. 'ರಾಮನ ಸೇವೆ ಮಾಡಿ ಬೆನ್ನ ಮೇಲೆ ಮೂರು ಗೆರೆಯನ್ನು ಪಡೆದ ರಾಮಭಕ್ತನಾದ ಅಳಿಲನ್ನು ಕೊಂದೆಯಾ' ಎಂದರು. ನನಗೆ ಏನೂ ಅರ್ಥವಾಗಲಿಲ್ಲ. ಬೇಟೆ ಫಲಿಸಿದ ನಾನಂತೂ ಆ ರಾತ್ರಿ ಸರಿಯಾಗಿ ನಿದ್ದೆ ಮಾಡಲಿಲ್ಲ.

ಹಗಲಿನಲ್ಲಿ ಬೇಟೆಯಾಡುವುದು ಆಗ ಅಲ್ಲಿ ಕಷ್ಟಕರವಾಗಿತ್ತು. ಏಕೆಂದರೆ ಅಲ್ಲೆಲ್ಲಾ ಫಾರೆಸ್ಟ್ ಗಾರ್ಡ್‌ಗಳು ತಿರುಗಾಡುತ್ತಿದ್ದರು. ಒಂದಿಬ್ಬರು ಬೇಟೆಗಾರರಿಗೆ 'ಏರೋಪ್ಲೇನ್' ಸೇವೆಯೂ ಆಗಿತ್ತು. ಒಂದು ಸಾರಿ ಯಾರದೋ ಕೋವಿ ಮನೆಯಲ್ಲಿತ್ತು. ಅಪ್ಪನ ಕಾಯಿಲೆ ಸ್ವಲ್ಪ ವಾಸಿಯಾದ ಕಾಲ. ಯಾವಾಗಲಾದರೊಮ್ಮೆ ಅಪ್ಪ ಕಾಡಿಗೆ ಹೋಗಿ ಬರುತ್ತಿದ್ದರು. ಒಂದು ದಿನ ಅಪ್ಪ ಮನೆಯಲ್ಲಿರಲಿಲ್ಲ. ನಾನು ಕೋವಿಗೆ ಕೈ ಹಾಕಿದೆ. ಮತ್ತಿ ಮರದಲ್ಲಿ ಕೆಂಜೆರಿಯೊಂದು ಕೂಗಿ ಕೊಳ್ಳುತಿತ್ತು. ಅತ್ತ ಓಡಿದೆ. ಅದು ದಾರಿ ಕರೆಯಲ್ಲಿದ್ದ ಮರ. ಗಾರ್ಡ್‌ಗಳು ಓಡಾಡುವುದೂ ಅಲ್ಲಿಗಾಗಿಯೇ. ಹೆದರಿ ಹೆದರಿ ಅತ್ತ ಹೋದ ನಾನು ಕೆಂಜೆರಿಗೆ ಗುಂಡು ಹೊಡೆದೆ. ಅದು ಜಾರಿ ಒಂದು ರೆಂಬೆಯಲ್ಲಿ ಸಿಕ್ಕಿ ಕೊಂಡಿತು. ಕೋವಿ ಕೈಯಲ್ಲಿದ್ದರೆ ಅಪಾಯವೆಂದು ಮನೆಗೆ ಓಡಿದೆ. ಕೋವಿಯಿಟ್ಟು ಉದ್ದವಾದ ಕೋಲನ್ನು ತಕ್ಕೊಂಡು ಈ ಮರದತ್ತ ಬಂದೆ. ರೆಂಬೆಯಲ್ಲಿ ಸಿಕ್ಕಿಕೊಂಡದ್ದನ್ನು ಚುಚ್ಚಿ ಬೀಳಿಸುವ ಎಂದು. ಆದರೆ ಆ ಸಿಕ್ಕಿಕೊಂಡಿದ್ದ ಕೆಂಜೆರಿ ಅಲ್ಲಿರಲಿಲ್ಲ. ನಾನು ಭೂಮಿಗಿಳಿದು ಹೋದೆ. ಅದು ಅಲ್ಲಿಂದ ಎದ್ದು ಹೋಗಿದೆ ಎಂದು ಬಹುವಾಗಿ ನೊಂದುಕೊಂಡೆ. ಅಪ್ಪ ಹಂದಿ ಹೊಡೆಯಲೋ ಕಡವೆ ಹೊಡೆಯಲೊ ತುಂಬಿದ್ದ ತುಂಬಾಗಿತ್ತು. ಅದನ್ನು ಈಗ ಖಾಲಿ ಮಾಡಿ ಅಪ್ಪನ ಭೈರವ ರೂಪಕ್ಕೆ ಬಲಿಯಾಗ ಬೇಕಾಯಿತಲ್ಲಾ ಎಂದುಕೊಂಡು ಆ ಮರದ ಬುಡದತ್ತ ಹೋದೆ. ಅರೆ ಅಲ್ಲೇ ಇದೆ ಆ ಕೆಂಜೇರಿ ! ಎತ್ತಿ ಮನೆಗೊಯ್ದಾಗ ನನ್ನ ಖುಷಿಗೆ ಎಲ್ಲೆ ಇಲ್ಲದಾಯ್ತು.

ನಾನು ಎಸ್ಸೆಸ್ಸೆಲ್ಸಿ ಓದುತ್ತಿರುವಾಗಿನ ಕಾಲ. ನನಗೆ ಬೇಟೆಯ ಹುಚ್ಚು ಎಷ್ಟಿತ್ತೆಂದರೆ ಗಣಿತದ ಸೂತ್ರಗಳನ್ನು ಚೀಟಿಯಲ್ಲಿ ಬರೆದುಕೊಂಡು ಕಾಡಿನಲ್ಲಿ ಓದುತ್ತಿದ್ದೆ ! ಆ ಸೂತ್ರಗಳನ್ನು ಕಲಿಯದೇ ಇದ್ದರೆ ಡೆಸ್ಕ್ ಮೇಲೆ ನಿಲ್ಲಿಸಿ ಮೀಟರ್ ಸ್ಕೇಲಿನಿಂದ ಆ ಗಣಿತದ ಮೇಷ್ಟ್ರು ಹೊಡೆಯುತ್ತಾರಲ್ಲ ! ಒಂಟಿ ಕಾಲಿನಲ್ಲಿ ನಿಲ್ಲಿಸ್ತಾರಲ್ಲ ! ಕಾಡಿನಲ್ಲಿ ಕುಳಿತು ಕಾಲ ಕಳೆಯುತ್ತಿದ್ದನೇ ಹೊರತು ಬೇಟೆಯೇನೂ ಆಗುತ್ತಿರಲಿಲ್ಲ. ಯಾವ ಕಡುವಿನಲ್ಲಿ ಯಾವ ಪ್ರಾಣಿ ಬರುತ್ತದೆ, ಎಲ್ಲಿ ಕುಳಿತುಕೊಳ್ಳಬೇಕು, ಹೇಗೆ ಕುಳಿತುಕೊಳ್ಳಬೇಕು ಅನ್ನುವ ಸಂಗತಿನೇ ಗೊತ್ತಿರಲಿಲ್ಲ. ಕಾಡಿನಲ್ಲಿ ಹಣ್ಣು ಹುಡುಕುವ ದನಗಳನ್ನು ಕಂಡರೆ ಕಡವೆಯೆಂದೇ ಭಾವಿಸಿ ಬಿಡುತ್ತಿದ್ದೆ. ದನದ ಹೆಜ್ಜೆ ಗುರುತಿಗೂ ಕಡವೆ, ಜಿಂಕೆಗಳ ಹೆಜ್ಜೆ ಗುರುತಿಗೂ ವ್ಯತ್ಯಾಸ ತಿಳಿಯುತ್ತಿರಲಿಲ್ಲ. ಗುಳ್ಳೆನರಿಗಳ ಹೆಜ್ಜೆ ಗುರುತನ್ನು ಹುಲಿಯ ಹೆಜ್ಜೆಯೆಂದೇ ತಿಳಿದು ಮನೆಗೆ ಓಡಿ ಬರುತ್ತಿದ್ದೆ. ಮುಚ್ಚ (ಮುಸುವಾ)ವೊಂದು ಮರದಲ್ಲಿ ಕುಳಿತಿರಲು 'ಕರಿ ಕೋಟು ಹಾಕಿದ ಬೇಟೆಗಾರ' ಯಾರೆಂದು ನೋಡಿದ್ದೂ ಉಂಟು. ಒಮ್ಮೆಯಂತೂ ಕಾಡಿನಲ್ಲಿ ಮಗುವಿನ ಹೆಜ್ಜೆ ಗುರುತನ್ನೇ ಹೋಲುವ ಹೆಜ್ಜೆಯನ್ನು ಕಂಡೆ. ಮಗು ಕಾಡಿನಲ್ಲಿರಲು ಸಾಧ್ಯವಿಲ್ಲ. ಹಾಗಿದ್ದರೆ ಇದೇನಿರಬಹುದು? ಓಹೋ ಇದು ದೆವ್ವದ್ದೇ ಕಿತಾಪತಿ ! 'ಈ ಬೇಟೆಗಿಷ್ಟು ಬೆಂಕಿ ಹಾಕ' ಎನ್ನುತ್ತ ಮನೆಗೆ ಓಡಿಬಂದೆ. ಅಪ್ಪನೊಡನೆ ಈ ವಿಚಾರ ಹೇಳಿದೆ. 'ಅದು ಮುಳ್ಳು ಹಂದೀದು ಹೆಜ್ಜೆ ಗುರುತಪ್ಪಾ' ಅಂತ ಅಪ್ಪ ಹೇಳಿದಾಗ ನಾನು ಬೆಪ್ಪಾದೆ.

ನಮ್ಮೂರಿನ ಕೆಲವರ ಮನೆಯಲ್ಲಿ ಕಡವೆ ಅಥವಾ ಜಿಂಕೆಯ ಕೊಂಬುಗಳಿದ್ದವು. ಆ ಕೊಂಬಿಗೆ ತಮ್ಮ ಕೋಟನ್ನೋ ಶರಟನ್ನೋ ನೇತು ಹಾಕಿದ್ದನ್ನು ನೋಡಿದ್ದೆ. ಇನ್ನು ಕೆಲವು ಮನೆಯಲ್ಲಿ ಅಕ್ಕಿ ಬೀಸುವ ಕಲ್ಲನ್ನು ಕಡವೆ ಹಾಳೆಯ ಮೇಲೆ ಇಟ್ಟು ಬೀಸುತ್ತಿದ್ದರು. ಇನ್ನೂ ಕೆಲವರಲ್ಲಿ ಕಾಡುಕುರಿಯ ಅಥವಾ ಜಿಂಕೆಯ ಹಾಳೆಯ ಮೇಲೆ ಕಲ್ಲನ್ನು ಇಟ್ಟು ಅಕ್ಕಿ ಬೀಸುತ್ತಿದ್ದರು. ಕಾಡುಕೋಳಿಯ ರಂಗಾದ ತುಪ್ಪಟ ಕೆಲವು ಮನೆಗಳ ಗೋಡೆಯನ್ನು ಅಲಂಕರಿಸಿತ್ತು. ನನ್ನ ನೆರಿಕೆ ಮನೆಯಲ್ಲೂ ಇಂಥವು ಇದ್ದಿದ್ದರೆ ಅಂತ ಏನೋ ಒಂಥರದ ಆಸೆ....

ನಾನು ಒಂದು ಬೆಳಿಗ್ಗೆ ಕೋವಿ ಹಿಡಿದು ಕಾಡಿನತ್ತ ನಡೆದೆ. ಕಕ್ಕೆ ಗಿಡದ ಒಂದೆರಡು ಎಲೆಯನ್ನು ಕೊಯ್ದು ಜೇಬಿನಲ್ಲಿಟ್ಟು ಕೊಂಡೆ. ಚೂರಿ ಮುಳ್ಳಿನ ಪೊದೆಯ ಹತ್ತಿರ ಕುಳಿತೆ. ಕೋವಿ ತೊಡೆಯ ಮೇಲಿತ್ತು. ಈಗ ನಾನು ಬೇಟೆಯ ಸಣ್ಣ ಪುಟ್ಟ ತಂತ್ರಗಳನ್ನು ತಿಳಿದುಕೊಂಡಿದ್ದೆ. ಆದರೆ ಗೊಂಡಾರಣ್ಯದ ಕಡೆ ಹೋಗಿ ಬೇಟೆಯಾಡುವ ಧೈರ್ಯ ಇರಲಿಲ್ಲ. ಕಾಡುಕೋಳಿಗಳನ್ನು ನನ್ನತ್ತ ಬರುವಂತೆ ಮಾಡಲು 'ನಮಸ್ತೆ' ಮಾಡುವಂತೆ ಕೈ ಜೋಡಿಸಿಕೊಂಡೆ. ಎರಡು ಹೆಬ್ಬೆರಳ ನಡುವೆ ಆಗಲೆ ಕೊಯ್ದು ಕೊಂಡಿದ್ದ ಕಕ್ಕೆ ಎಲೆಯಲ್ಲಿ ಒಂದನ್ನು ಇಟ್ಟುಕೊಂಡೆ. ಕೈಯನ್ನು ಬಾಯಿಗಿಟ್ಟು ಉಸಿರೆಳೆದು ಉಸಿರು ಬಿಟ್ಟೆ. ಆಗ 'ಕೀಂವ್ ಕೀಂವ್' ಎಂಬ ಧ್ವನಿ ಬಂತು. ಅದೇ ಧ್ವನಿಯನ್ನು ಕಾಡುಕೋಳಿ ಕೂಗುವ ಧ್ವನಿಯಂತೆ ಬದಲಾಯಿಸಿ 'ಕೆಕ್‌ಕೆಕ್' ಅಂತ ಐದಾರು ಬಾರಿ ಕೂಗಿ ಸುಮ್ಮನಾದೆ. ನಾನು ಯಾವಾಗ ಕೂಗುವುದನ್ನು ನಿಲ್ಲಿಸಿದೆನೋ ಆಗ ದೂರದಿಂದ ಕಾಡುಕೋಳಿಯ ಕೂಗು ಕೇಳಿಬಂತು. ನನ್ನ ಮನಸ್ಸು ಅರಳಿತು. ಅತ್ತ ಕಡೆಯಿಂದ ಬಂದ ಕೂಗು ನಿಲ್ಲಲು ಪುನಃ ನಾನು ಕೂಗಲು ಶುರು ಮಾಡಿದೆ. ಆಗ ಆ ಕಡೆಯ ಕೂಗು ಹೆಚ್ಚಾಯಿತು. ನಾನು ಕುಳಿತಲ್ಲಿಂದ ಕದಲಲಿಲ್ಲ. ನನ್ನ ತೊಡೆಗಳೆರಡು ಜುಮ್ ಜುಮ್ ಅನ್ನುತ್ತ ಕೋವಿಯನ್ನು ಹೊರಲಾಗದೆ ಹೊತ್ತಿದ್ದವು. ಅತ್ತಲಿನ ಕೋಳಿಯ ಕೂಗು ಇನ್ನೂ ಹತ್ತಿರ ಬರುತ್ತಾ ಇತ್ತು. ನನ್ನ ನೋವು ಮಾಯವಾದಂತಾಯಿತು. ನಾನು ಸುಮ್ಮನೆ ಕುಳಿತೆ. ಅಷ್ಟರಲ್ಲಿ ಆ ಕಡೆಯ ಕೂಗೂ ನಿಂತಿತು. ಓ ! ಕೋಳಿ ಹೋಗಿಬಿಡ್ತಾ ಎಂದು ನಿರಾಶನಾದೆ. ನಾನು ಮತ್ತೆ ಕೂಗಿದೆ. ಆಗ ಆ ಕೋಳಿಯೂ ಕೂಗಿತು. ಸಾಮಾನ್ಯವಾಗಿ ಬೆಳಿಗ್ಗೆ ಹೊತ್ತು ಕಾಡು ಕೋಳಿಯ ಕೂಗನ್ನು ಮತ್ತೊಂದು ಕೋಳಿ ಕೇಳಿದಾಕ್ಷಣವೇ ಅದರಲ್ಲೂ ಹುಂಜವಂತೂ ಮೈ ಕೆದರಿ, ರೆಕ್ಕೆ ಬಡಿದುಕೊಂಡು 'ಗುಮ್‌ಗುಮ್' ಅನ್ನುತ್ತ ಬಂದು ಈ ಕೋಳಿ ಹೇಂಟೆಯಾದರೆ ಬೆನ್ನು ಮೆಟ್ಟುತ್ತದೆ. ಇದು ಹುಂಜವಾದರೆ ಕಾದಾಡಲು ನಿಲ್ಲುತ್ತದೆ. ಆದರೆ ಈ ದಿನ ನಾನು ಎಷ್ಟೇ ಕೂಗಿದರೂ ಆ ಕಡೆಯಿಂದ ಕೋಳಿ ಓಡಿ ಬರದೆ ನಿಧಾನ ನಿಧಾನವಾಗಿ ಬರುತಿತ್ತು. ಇದು ಯಾಕೆ? ಈ ಕೋಳಿಯನ್ನೇ ಅದು ಕಾಯುತ್ತಿರಬಹುದಾ ಎಂದುಕೊಂಡೆ. ನಾನು ಮಾತ್ರ ಆ ಕಡೆ ಹೋಗಲಿಲ್ಲ. ಯಾಕೆಂದರೆ ನಾನು ಎರಡೂ ಕೈಗಳನ್ನು ಜೋಡಿಸಿಕೊಂಡು ಕುಕ್ಕರ ಕಾಲಿನಲ್ಲಿ ಕೂತಿದ್ದೆ. ತೊಡೆಯ ಮೇಲೆ ಕೋವಿ ಇದೆ. ಕೂಗಿಕೊಂಡೇ ಹೋಗಲಾಗದು. ಅದೇ

ಆಗ್ನೇಯದಲ್ಲಿ ಕಾರ್ಖಾನೆಯ ಟ್ರಾನ್ಸ್‌ಫಾರ್ಮರ್ - ಸಂಪತಿಗದು ಪ್ರಮೋಟರ್

ಇತ್ತ ಬರಲಿ ಎಂದು ಕಾಯುತ್ತಾ ಕುಳಿತೆ. ನನ್ನ ನಿರೀಕ್ಷೆಯಂತೆ ಆ ಕೋಳಿ ತೆಕ್ಕುತ್ತಾ ತೆಕ್ಕುತ್ತಾ ಬರುತ್ತಾ ಇತ್ತು. ನಡಿಗೆಯ ಸದ್ದೂ ಕೇಳಿತು. ನಾನು 'ತೆಕ್ ತೆಕ್ ತೆಕ್‌s' ಅನ್ನುವ ಕೂಗಿನ ಧ್ವನಿಯನ್ನು ಸ್ವಲ್ಪ ಬದಲಿಸಿ ಬರೇ 'ತೆಕ್ ತೆಕ್' ಅಂತ ಕೂಗಿ ನಿಲ್ಲಿಸಿಬಿಟ್ಟೆ. ಕೂಡಲೆ ಕೋವಿ ಎತ್ತಿ ಅತ್ತ ಗುರಿ ಹಿಡಿದುಕೊಂಡೆ. ನನ್ನ ಎದೆ ಡವಗುಡುತಿತ್ತು. ಈಗ... ಇನ್ನೊಂದು ಕ್ಷಣದಲ್ಲಿ ಗುಂಡು ಸಿಡಿಯಬೇಕು. ಅಬ್ಬಾ ! ನನ್ನ ಎದೆ ಧಸಕ್ಕೆಂದಿತು. ಆ ಕಡೆಯಿಂದ ಕೂಗಿಕೊಂಡು ಬಂದದ್ದು ಮತ್ತೊಬ್ಬ ಬೇಟೆಗಾರ ! ಅವನು ತನ್ನ ಗುರಿಯನ್ನು ನನ್ನ ಸದ್ದಿನ ಕಡೆಗೇ ನೀಡಿಕೊಂಡಿದ್ದಾನೆ. ನಾನೇನಾದರೂ ಸ್ವಲ್ಪ ಅಲುಗಾಡಿದ್ದರೂ ಸಾಕಿತ್ತು, ಗುಂಡು ಹೊಡೆದೇ ಬಿಡುತ್ತಿದ್ದ. ನನ್ನ ಬೇಟೆಯ ಕಥೆ ಮಣ್ಣಾಗುತ್ತಿತ್ತು. "ಓಯ್ ನಾನು ಮಾರಾಯ ನಾನೂ" ಎಂದೆ. "ಹ್ಹಾ ! ಯಾರು?" ಅಂತ ಅವನೂ ಎದ್ದು ನಿಂತು ಹಣೆ ಚಚ್ಚಿಕೊಂಡ. ಕೋಳಿಯೂ ಬೇಡ ಹಂದಿಯೂ ಬೇಡ ಎನ್ನುತ್ತ ನಾನು ಮನೆಯತ್ತ ನಡೆದೆ.

ಇದಾಗಿ ತಿಂಗಳೇ ಕಳೆದಿರಬಹುದು. ಒಂದು ಸಂಜೆ ಕಾಡಿನತ್ತ ಹೋಗುವ ಮನಸ್ಸಾಗಿ ಕೋವಿಯನ್ನು ಹೆಗಲ ಮೇಲಿಟ್ಟು ಕಳ್ಳ ದಾರಿಯಲ್ಲಿ ಸಾಗಿ ಗದ್ದೆ ಬದಿಯ ಕಾಡಿನಲ್ಲಿ ಕುಳಿತೆ. ಒಂಟಿಯಾಗಿ ಕಾಡಿನಲ್ಲಿ ಕುಳಿತು ಪ್ರಾಣಿಗಳ ಚಲನೆ ನೋಡುವುದೊಂದು ಆನಂದ. ನಮ್ಮದು ಎಲೆ ಉದುರುವ ಕಾಡು. ಬೇಸಗೆಯಲ್ಲಿ ತೇಗದ ಮರ ಎಲೆ ಉದುರಿಸಿ ಬೋಳಾಗಿ ನಿಲ್ಲುತ್ತಿದ್ದವು. ಕಾಡಿನಲ್ಲಿ ಹೋಗುವುದೇ ಕಷ್ಟ. ತರಗೆಲೆ ತುಳಿದಾಗಂತೂ ಆ ಸದ್ದು ಮಲಗಿದ್ದ ಮೃಗವನ್ನು ಓಡುವಂತೆ ಮಾಡುತಿತ್ತು. ನಾನು ಕೆಲವೊಮ್ಮೆ ತುದಿಗಾಲಲ್ಲೇ ನಡೆದುದೂ ಉಂಟು. ಹಾಗೆ ನಡೆದು ಒಂದು ತಡಸಿಲ ಮರದ ಬುಡದಲ್ಲಿ ನೆಲ ಒಳಿ ಮಾಡಿ ಕುಳಿತೆ. ಕಾಡುಕೋಳಿಯನ್ನು ಹೊಡೆಯ ಬೇಕೆಂಬುದು ನನ್ನ ಬಹುದಿನಗಳ ಆಸೆ. ನನಗೆ ಹೇಂಟೆಗಿಂತಲೂ ಹುಂಜವನ್ನು ಕಂಡರೆ ತುಂಬಾ ಇಷ್ಟ. ಯಾಕೆಂದರೆ ಅದರ ಮೈ ಬಣ್ಣ ಅಷ್ಟು ಸುಂದರ. ಕುತ್ತಿಗೆಯ ಭಾಗದ ರಂಗುರಂಗಿನ ತುಪ್ಪಟ ನೋಡಲು ಚೆಂದ. ಕೆಂಬಣ್ಣದ ಜುಟ್ಟು, ಜೋತಾಡುವ ಗಡ್ಡ, ಕಾಲಿನ ಮುಳ್ಳು, ಬಾಗಿದ ಪುಕ್ಕ.... ಹಾ! ನನಗೆ ಅಂಥ ಹುಂಜ ಸಿಕ್ಕಿದ್ದರೆ.... ಅವರ ಮನೆಯ ಗೋಡೆಯಲ್ಲಿ ಅಂಟಿಸಿದಂತೆ ನನ್ನ ಮನೆಯ ನೆರಿಕೆಗೂ ಅದರ ರಂಗಾದ ತುಪ್ಪಟವನ್ನು ಅಂಟಿಸ ಬೇಕೆಂದು ಆಸೆ ಪಟ್ಟೆ. ಹೀಗೆ ಆಶಿಸುತ್ತಾ ಕುಳಿತಿರಲು 'ದರಬರಾ' ಅಂತ ಸದ್ದಾಗಲು ಕುಳಿತಲ್ಲೇ ಕುಣಿವಷ್ಟು ಖುಷಿಯಾಯಿತು. ಇದು ಹುಂಜನೇ ಇರಬೇಕು. ಅದರ ಕೆಂಪಾದ ಜುಟ್ಟು, ಗಡ್ಡ, ರಂಗಾದ ತುಪ್ಪಟ, ಬಾಗಿದ ಪುಕ್ಕ, ಕಾಲಿನ ಮುಳ್ಳು..... ಹೀಗೆ ಯೋಚಿಸುತ್ತಿರುವಂತೆ ಸದ್ದು ಹತ್ತಿರವಾಯ್ತು. ಸದ್ದಿನೆಡೆಗೆ ಕೋವಿಯನ್ನು ತಿರುಗಿಸಿದೆ. ಬೇಟೆ ಕೊತ್ತಿಯನ್ನು ಎಳೆದು ನಿಲ್ಲಿಸಿದೆ. ಸದ್ದು ನಿಂತಿತು. ಪುನಃ 'ದರಬರಾ' ಸದ್ದಾಯಿತು. ಸಂಜೆ ಹೊತ್ತಲ್ಲಿ ಕೋಳಿಗಳು ತಮ್ಮ ಮೇಚಿಗಿಂತಲೂ ತಾವು ಅಡಗುವ ತಾಣಕ್ಕೆ ಬೇಗನೆ ಬರುವುದುಂಟು. ಆದರೆ ಈ ಸದ್ದು ಅಡಗುದಾಣಕ್ಕೆ ಹೋಗುವ ಕಾತರ ಇರುವಂತೆ ಕಾಣುತ್ತಿಲ್ಲ. ಯಾಕೆ ಇಷ್ಟು ನಿಧಾನ ಎಂದುಕೊಂಡು ಅದೇ ಗುರಿಹಿಡಿದ ಸ್ಥಿತಿಯಲ್ಲೇ ಕುಳಿತೆ. ಕೈ ಸೋತು ಕೋವಿ ಕೆಳಗೆ ಮೇಲೆ ಆಡುತಿತ್ತು. ಅಷ್ಟರಲ್ಲಿ 'ಕೊಕ್' ಅನ್ನುವ ಸದ್ದು ಬಂತು. ಹಿಂದೊಮ್ಮೆ ಬಂದ 'ಕೃತಕ ಕೋಳಿ'ಯನ್ನು ನೆನೆದಾಗ ಸಣ್ಣಗೆ ಬೆವರು ಬಂತು. ಕೊಕ್ ಅನ್ನುವ ಸದ್ದಂತೂ ಇದು ಕೋಳಿಯೇ ಹೌದು ಎಂದು ಗಟ್ಟಿ ಮನಸ್ಸು ಮಾಡಿಕೊಂಡೆ. ಕೋಳಿಯಂತೂ ಕಾಣುತ್ತಿಲ್ಲ. 'ಕೊಕ್' ಅನ್ನುವ ಸದ್ದು ಮತ್ತೆ 'ದರಬರಾ' ಎಂದು ಕೇರುವ ಸದ್ದು..... ಇದು ಹುಂಜ ಅಲ್ಲವಾ? ಛೇ.... ಹುಂಜನೇ ಬರಬಾರದಾ.... ಆ ಸದ್ದು ಇನ್ನೂ ಹತ್ತಿರವೇ ಬಂತು. ಆಗ ಕೋಳಿಯನ್ನು ನೋಡಿದೆ. ಅದು ಹೇಂಟೆ. ಒಂದೇ ಅಲ್ಲ. ಆಚೀಚೆ ಓಡಾಡುವ ಇನ್ನೂ ಹಲವು ಕೋಳಿಗಳು. ಶ್ಯಾಬಾಶ್! ಒಂದೇ ಗುಂಡಿಗೆ ನಾಕಾರು ಕೋಳಿಗಳ ಬಳಿ ಬೀಳಿಸುವೆಂದು ಕೊಂಡೆ. ಹ್ಯಾಂಟೆಯೋ, ಲಾಕಿಯೋ, ಕಡ್ತವೋ ಯಂಥವೋ ಯಾವುದಾದರೇನಂತೆ - ಗುಂಡಿನ ಮುಂದೆ - ಅರರೇ ಇವು ಲಾಕಿಗಳೂ ಅಲ್ಲ, ಪಿಳ್ಳೆಗಳು ! ಹೂ ಪಿಳ್ಳೆಗಳು. ಥೂ.... ಎಂಥ ಕೆಲ್ಸವಾಯ್ತು. ಏನಾದರೂ ಆಗಲಿ - ಹೇಂಟೆಗೇ ಹೊಡೆಯುತ್ತೇನೆಂದು ಟ್ರಿಗರನ್ನು ಅದುಮಲು ತೋರು ಬೆರಳನ್ನು ಟ್ರಿಗರ್‌ಗಾರ್ಡಿನ ಒಳಗಿಟ್ಟೆ. ಇನ್ನೇನು ಅದುಮಬೇಕೆನ್ನುವಷ್ಟರಲ್ಲಿ ಹೇಂಟೆ ಕೊಕ್ ಕೊಕ್ ಅನ್ನುತ್ತ ಸೀದ ನನ್ನ ಹತ್ತಿರಕ್ಕೇ ಬಂತು. ಈಗ ಗುಂಡು ಹೊಡೆದರಂತೂ ಅದು ಚೂರು ಚೂರಾಗಿ ಬಿಡುತ್ತದೆ. ನನ್ನ ಯೋಚನೆ ಕವಲಾಯಿತು. ಕೋವಿಯನ್ನು ಮೆಲ್ಲನೆ ನೆಲದ ಮೇಲಿಟ್ಟೆ. ಬರಿಗೈಯಲ್ಲೇ ಕುಳಿತುಕೊಂಡೆ. ನಾನಿರುವಲ್ಲಿಗೇ ಹೇಂಟೆ ಬಂದರೆ ಅದನ್ನು ಹಿಡಿದುಕೊಳ್ಳುತ್ತೇನೆಂದು ನೆಲಹತ್ತ ಬಗ್ಗಿ ಕುಳಿತೆ. ಹೇಂಟೆಗೆ ತನ್ನ ಮರಿಗಳ ಮೇಲೇ ನಿಗಾ ಇದ್ದುದರಿಂದ ನನ್ನ ಇರುವು ಗೊತ್ತಾಗಲೇ ಇಲ್ಲ. ನಾನು ಕುಳಿತ ಒಳಿಯ ಮೇಲಿದ್ದ ಪೊದೆಯಲ್ಲಿ ಕೂರಲು ಅದು ಹವಣಿಸುತ್ತ ನೆಲವನ್ನೊಮ್ಮೆ ಪೊದೆಯನ್ನೊಮ್ಮೆ ನೋಡುತ್ತಿರಲು ನಾನು ಬೆಕ್ಕಿನಂತೆ ಅದರ ಮೇಲೆ ಜಿಗಿದೆ. ಹೇಂಟೆಯ ಮೇಲೆ ಬಿದ್ದಾಕ್ಷಣ ಅದು ಕೊರ್ರೇ.... ತ ಕೂಗಿಕೊಂಡು ಹಾರಿತು. ಪವಾಡವೋ ಎಂಬಂತೆ ಪಿಳ್ಳೆಗಳೂ ಮಾಯ !

ನಾನು ನಿಜವಾಗಿಯೂ ಬೆಪ್ಪನೇ ಸರಿ. ಮೊದಲೇ ಗುಂಡಾದರೂ ಹೊಡೆಯಬಾರದಿತ್ತಾ ಅಂತ ಬಯ್ದುಕೊಂಡೆ. ನಾನು ಹೇಂಟೆಯ ಮೇಲೆ ಹಾರಿ ಬಿದ್ದ ಜಾಗದಲ್ಲೇ ನಿಂತು ಸುತ್ತಲೂ ನೋಡಿದೆ. ಒಂದೈದು ನಿಮಿಷ ಮೌನ. ಮತ್ತೆ ಏನೋ ಸಣ್ಣ ಸದ್ದಾಯಿತು. ಇದೆಲ್ಲಿಂದ ಈ ಸದ್ದು? ಸುತ್ತಲೂ ತಿರುಗಿ ತಿರುಗಿ ನೋಡಿದೆ. ಆ ಸದ್ದು ನನ್ನೆರಡು ಕಾಲ ನಡುವೆ ! ತರಗೆಲೆಯ ಕೆಳಗೆ.... ಪೀಪೀ ಎಂದು ಕೂಗಿಕೊಳ್ಳುತ್ತ ಒಂದು ಪಿಳ್ಳೆ ತರಗೆಲೆಯ ಕೆಳಗಿಂತ ತಲೆಯೆತ್ತಿತು. ಹಿಡಿದುಕೊಳ್ಳಲಾ? ಇನ್ನೇನು ಹಿಡಿದೇ ಕೊಳ್ಳುವುದೆಂದು ಹಾಗೆ ಮಾಡಿದೆ. ಹಿಡಿದುಕೊಂಡಾಕ್ಷಣ ಆ ಪಿಳ್ಳೆ ಪೀಂಪೀ ಎನ್ನುತ್ತಾ ಹಿಡಿಯೊಳಗಿಂದ ತಪ್ಪಿಸಿಕೊಳ್ಳಲು ಕೊಸರಾಡಿತು. ಈ ಕೂಗಿಗೆ ಅಲ್ಲಿ ಇಲ್ಲಿ ಅಡಗಿದ್ದ ಎಲ್ಲಾ ಪಿಳ್ಳೆಗಳೂ ಹೊರಬಂದವು. ಎಲ್ಲಾ ಪಿಳ್ಳೆಗಳನ್ನೂ ಹಿಡಿದುಕೊಳ್ಳಬೇಕೆಂದು ಕೊಂಡೆ. ಆದರೆ ಹಿಡಿದು ಇಟ್ಟುಕೊಳ್ಳುವುದಾದರೂ ಹೇಗೆ? ಕೂಡಲೆ ಶರಟನ್ನು ಕಳಚಿದೆ.

ಒಂದೊಂದಾಗಿ ಹಿಡಿದು ಶರಟಿನೊಳಗೆ ಹಾಕಿದೆ. ಇನ್ನು ಎರಡು ಪಿಳ್ಳೆಗಳು ಮಾತ್ರ ಅತ್ತಿತ್ತ ಓಡಾಡುತ್ತ ಕಮ್ಯುನಿಸ್ಟ್ ಕಾಡಿನಲ್ಲಿ ಅಡಗಿ ಕೊಳ್ಳಲು ನುಗಿದವು. ನಾನು ಅವುಗಳನ್ನು ಹ್ಯಾಗಾದರೂ ಹಿಡಿಯಬೇಕೆಂದು ಜೊತೆಯಲ್ಲೇ ನುಗ್ಗಿದೆ. ಅಷ್ಟರಲ್ಲಿ ಹೇಂಟೆ ಕೊಕ್ಕೋ ಎಂದುಕೊಳ್ಳುತ್ತಾ ನನ್ನನ್ನು ಮೆಟ್ಟಲು ಹಾರಿ ಬಂತು. ಮೈ ಕೆದರಿಕೊಂಡು ನನ್ನ ತಲೆ ಮೇಲೆ ಹಾರಿ ರೆಂಬೆಯೊಂದರಲ್ಲಿ ಕುಳಿತು ಮತ್ತೆ ನೆಲಕ್ಕೆ ಹಾರಿ ರೆಕ್ಕೆ ಬಡಿದು ನನ್ನ ಎದೆಗೆ ಒದೆಯಲು ಕೊಕ್ಕೋ ಎನ್ನುತ್ತ ಹಾರಿ ಬಂತು. ಕೈಯನ್ನು

ಮುಖದತ್ತ ಹಿಡಿದುಕೊಂಡೆ. ನನಗೆ ತಕುಪುಕು ಶುರುವಾಯಿತು. ನನ್ನ ಮೆಟ್ಟಿ ಕುಕ್ಕಿಬಿಟ್ಟಾತು. 'ನನ್ನ ಎರಡು ಪಿಳ್ಳೆಗಳು' ಬೇರೆ ಸಿಗುತ್ತಿಲ್ಲ. ಅವುಗಳನ್ನು ಹಿಡಿಯಬೇಕು. ಹೇಂಟೆಯ ಹೊಡೆತವನ್ನೂ ತಪ್ಪಿಸಿಕೊಳ್ಳಬೇಕು. ಎಲ್ಲಾ ಗ್ರಾಚಾರನೇ ಎಂದು ಕೊಂಡು ಆ ಎರಡು ಪಿಳ್ಳೆಗಳನ್ನು ಹಿಡಿವ ಸಾಹಸಕ್ಕೆ ಹೋಗದೆ ಒಳಿ ಕುಳಿತ ಜಾಗದತ್ತ ಓಡಿದೆ. ಹಿಡಿಯೊಳಗಿದ್ದ ಪಿಳ್ಳೆಗಳಂತೂ ಪೀಂಪೀ ಎನ್ನುತ್ತಲೇ ಇರಲು ಮತ್ತೆ ಹೇಂಟೆ ನನ್ನ ಬಳಿಗೆ ಬಂತು. ಒಂದೋ ಈ ಪಿಳ್ಳೆಗಳನ್ನೂ ಬಿಡಬೇಕು. ಇಲ್ಲ ಆ ಹೇಂಟೆಯನ್ನು ಹಿಡಿಯಬೇಕು. ಏನು ಮಾಡಲಿ? ಒಂದು ಹಿಡಿಯಲ್ಲಿ ಪಿಳ್ಳೆಗಳನ್ನು ಹಿಡಿದುಕೊಂಡು ಮತ್ತೊಂದು ಕೈಯಿಂದ ಕೋವಿಯನ್ನು ಹಿಡಿದುಕೊಂಡೆ. ಹೇಂಟೆ ಮತ್ತೊಮ್ಮೆ ನನ್ನ ತಲೆ ಮೇಲೆ ಹಾರಿಬರಲು ಕೋವಿಯ ಕೊಳದಿಂದ ಹೊಡೆಯಲು ನೋಡಿದೆ. ಗುಂಡು ಹೊಡೆಯೋಣವೆಂದರೆ ಕೈಯಲ್ಲಿರುವ ಪಿಳ್ಳೆಗಳನ್ನು ಕೆಳಗಿಡಬೇಕು. ಆಗ ಅವುಗಳೂ ಓಡಿದರೆ? ಸಿಕ್ಕಿದ್ದೇ ಸೀರುಂಡೆ ಎನ್ನುವಂತೆ ಒಳಿಯಿಂದ ಹೊರಬಂದೆ. ಅಷ್ಟರಲ್ಲಿ ಆ ತಪ್ಪಿಸಿ ಕೊಂಡಿದ್ದ ಎರಡು ಪಿಳ್ಳೆಗಳಿದ್ದವಲ್ಲ. ಅವು ಹೇಂಟೆಯೊಡನೆ ಸೇರಿಕೊಂಡವು. ತಾಯಿಯೊಡನೆ ಆ ಪಿಳ್ಳೆಗಳು ಬದುಕಿಕೊಳ್ಳಲಿ ಎನ್ನುತ್ತ ಈ ಪಿಳ್ಳೆಗಳೊಡನೆ ಮನೆ ಸೇರಿದೆ.

ಮನೆ ತಲುಪುವಾಗ ಕತ್ತಲು ಕತ್ತಲಾಗುತಿತ್ತು. ಅಕ್ಕ, ಅವ್ವ, ಅಪ್ಪನೊಡನೆ ಪಿಳ್ಳೆಗಳನ್ನು ಹಿಡಿದ ಬಗ್ಗೆ ಕೊಚ್ಚಿಕೊಂಡೆ. ಆ 'ಹೂ ಪಿಳ್ಳೆ'ಗಳನ್ನು ಒಂದೊಂದಾಗಿ ಅಡಿಗೆ ಮನೆಯಲ್ಲಿ ಬಿಟ್ಟೆ. ಒಂದು ಪಿಳ್ಳೆಯನ್ನು ಹಿಡಿದು ನನ್ನ ನಾಲಗೆಯನ್ನು ಅದರ ಕೊಕ್ಕಿಗೆ ಮುಟ್ಟಿಸಿದೆ. ನನ್ನ ನಾಲಗೆಯ ಎಂಜಲನ್ನು ಅದು ಹೀರಿಕೊಂಡಿತು. ಅಯ್ಯೋ ಪಾಪ ! ಇದಕ್ಕೆ ತುಂಬಾ ಬಾಯಾರಿಕೆಯಾಗಿದೆಯಲ್ಲಾ ಎಂದುಕೊಂಡು ತಟ್ಟೆಯಲ್ಲಿ ನೀರಿಟ್ಟೆ. ಎಲ್ಲಾ ಐದು ಮರಿಗಳೂ ತಟ್ಟೆಯೊಳಗಿಳಿದು ನೀರಿಗೆ ಕೊಕ್ಕನ್ನು ಅದ್ದಿ ತಲೆ ಮೇಲೆತ್ತಿ ಕುಡಿಯತೊಡಗಿದವು. ನಮ್ಮ ಬೆಕ್ಕು ಎಲ್ಲಿತ್ತೋ ಕಾಣೆ. ಕ್ಷಣದಲ್ಲಿ ಎಗರಿಬಿದ್ದು ಒಂದು ಪಿಳ್ಳೆಯೊಡನೆ ಹೊರ ನಡೆಯಿತು. ನಾನು ದುಃಖಿತನಾದೆ. ಅಷ್ಟು ಕಷ್ಟದಿಂದ ಹಿಡಿದು ತಂದುದನ್ನು ಈ ಹಾಳು ಬೆಕ್ಕು ಹಿಡಿಯಿತಲ್ಲಾ. 'ಮನೆಗೆ ಬಾ ನಿನ್ನ ಕೊಲ್ಲುತ್ತೇನೆಂದೆ'. ಉಳಿದ ನಾಲ್ಕು ಮರಿಗಳಿಗೆ ನುಚ್ಚು ಹಾಕಿದೆ. ದೀಪದ ಬೆಳಕಲ್ಲಿ ಹೆಕ್ಕತೊಡಗಿದವು. ಅಲ್ಲೆ ಮುಚ್ಚಿದೆ.

ಪಿಳ್ಳೆಗಳು ಹೆದರಿಯೋ ಅಥವಾ ಚಳಿಗೋ ನಡುಗುತ್ತಿದ್ದವು. ಪಿಳ್ಳೆಗಳು ಪೀಂಪೀ ಎಂದು ಕೂಗುವುದು ಹೆಚ್ಚಾಯಿತು. ಬುಟ್ಟಿಯನ್ನು ತೆಗೆದು ನೋಡಿದೆ. ಒಂದು ಪಿಳ್ಳೆ ಮತ್ತೊಂದರ ರೆಕ್ಕೆಯೊಳಗೆ ತಲೆ ತೂರಿಸಲು ಪ್ರಯತ್ನಿಸುತ್ತಿತ್ತು. ಅದು ಇದರ ರೆಕ್ಕೆಯೊಳಗೆ ತಲೆ ತೂರಿಸಲು ಪ್ರಯತ್ನಿಸುತಿತ್ತು. ಒಮ್ಮೊಮ್ಮೆ ಕತ್ತಿಗೆ ಕತ್ತನ್ನು ತಗಲಿಸಿ ಕತ್ತರಿಯಂತೆ ನಿಂತುಕೊಳ್ಳುತ್ತಿದ್ದವು. ಇವತ್ತೋ ನಿನ್ನೆಯೋ ಮೊಟ್ಟೆಯಿಂದ ಹೊರಬಂದ ಮರಿಗಳಾಗಿರ ಬೇಕು. ತಾಯಿ ರೆಕ್ಕೆಯೊಳಗೆ ಹೊಟ್ಟೆಯ ಕೆಳಗೆ ಬೆಚ್ಚಗಿರಬೇಕಾದ ಮರಿಗಳಲ್ಲವಾ? ಅಪ್ಪನೊಡನೆ ಈ ಮರಿಗಳ ಸ್ಥಿತಿಯನ್ನು ಹೇಳಿದೆ. ಅವ್ವ ಒಂದು ಉಪಾಯವನ್ನು ಸೂಚಿಸಿದರು. ನಾವು ಮನೆಯಲ್ಲಿ ಸಾಕಿದ್ದ ಒಂದು ಹೇಂಟೆ ಮೂರು ದಿನಗಳ ಹಿಂದೆ ಮರಿ ಇಳಿಸಿತ್ತು. ಆ ಮರಿಗಳೊಡನೆ ಈ ಮರಿಗಳನ್ನು ಬಿಟ್ಟರೆ ಆಗಬಹುದು. ಇದೂ ಒಳ್ಳೆಯ ಉಪಾಯವೇ ಎಂದುಕೊಂಡು ಆ ರಾತ್ರಿ ಹಾಗೆ ಮಾಡಿದೆ. ಪಿಳ್ಳೆಗಳು ಸದ್ದು ಮಾಡದೆ ಆ ಹೇಂಟೆಯ ಬಿಸಿಯಲ್ಲಿ ನಿದ್ದೆ ಹೋದವು. ಬೆಳಿಗ್ಗೆ ಎಂದಿನಂತೆ ನಾಡುಕೋಳಿಯ ಪಿಳ್ಳೆಗಳೊಡನೆ ಈ ಕಾಡುಕೋಳಿಯ ಪಿಳ್ಳೆಗಳೂ ಮೇಚಿ ಮಾಡುತ್ತಿದ್ದವು. ಈ ಹೇಂಟೆ ತನ್ನದು ಪರರದು ಎಂಬುದನ್ನು ಹೇಗೆ ಪತ್ತೆ ಮಾಡಿತೋ ! ಕಾಡುಕೋಳಿಯ ಪಿಳ್ಳೆಗಳಿಗೆ ಕುಕ್ಕಲು ಶುರುಮಾಡಿತು. ಇದರಿಂದಾಗಿ ಈ ನಾಲ್ಕು ಪಿಳ್ಳೆಗಳೇ ಬೇರೆಯಾಗಿರುತ್ತಿದ್ದವು.

ನನ್ನ ನಿತ್ಯದ ಕೆಲಸಗಳಲ್ಲಿ ಈ ಪಿಳ್ಳೆಗಳ ಆರೈಕೆಯೂ ನಡೆಯಿತು. ಒಂದು ಹುಂಜವನ್ನಾದರೂ ಚೆನ್ನಾಗಿ ಸಾಕಬೇಕೆಂಬ ದೊಡ್ಡ ಕನಸು ಕಂಡೆ. ಹುಂಜದ 'ತೆಕ್ಕೂರ್ ತೇರ್ ತೆಕ್' ಎಂಬ ಕೂಗನ್ನು ಕೇಳಬೇಕು. ಬಣ್ಣದ ತುಪ್ಪಟ, ಕೆಂಪಾದ ಜುಟ್ಟು, ಜೋತಾಡುವ ಗಡ್ಡ, ಬಾಗಿದ ಪುಕ್ಕ, ಕಾಲಿನ ಮುಳ್ಳು ಇವನ್ನು ಕಾಣುವ ಹಂಬಲ ದೊಡ್ಡದಾಯಿತು.

ದಾರಿಯಲ್ಲಿ, ತರಗತಿಯಲ್ಲಿ ನಾನು ಹಿಡಿದ ಕೋಳಿ ಮರಿಗಳ ಕುರಿತು ರಂಗುರಂಗಾಗಿ ವರದಿ ನೀಡಿದ್ದೆ. ಊರವರ ಕಿವಿಗೂ ಈ ಸುದ್ದಿ ಮುಟ್ಟಿತು. ಕೆಲವರು ಬಂದು ನೋಡಿದರು. ಆಗಂತೂ ನಾನು ಉಬ್ಬಿ ಹೋದೆ.

ಮನೆಯ ಕೋಳಿಗಳೊಡನೆ ಈ ಕಾಡುಕೋಳಿಗಳು ಅಷ್ಟಾಗಿ ಬೆರೆಯುತ್ತಿರಲಿಲ್ಲ. ಅಂಗಳದಲ್ಲಿ ಬತ್ತವನ್ನೋ ನುಚ್ಚನ್ನೋ ಹಾಕಿದರೆ ಕಾಡು ಕೋಳಿ ಮರಿಗಳು ಓಡಿ ಬಂದು ಒಂದೆರಡು ಕಾಳನ್ನು ಹೆಕ್ಕಿ ಮತ್ತೆ ಓಡಿಬಿಡುತ್ತಿದ್ದವು. ಆಗ ನಾನು ಬೇರೆ ಕೋಳಿಗಳಿಲ್ಲದಿದ್ದ ಸಮಯ ನೋಡಿ ಇವುಗಳಿಗೇ ಮೇಚಿ ಹಾಕುತ್ತಿದ್ದೆ. ಆಗಲೂ ಅವು ಬಯಲಿಗೆ ಬರಲು ಹೆದರಿಕೊಳ್ಳುತ್ತಿದ್ದವು. ಹಿಡಿದುಕೊಂಡು ಸ್ವಲ್ಪ ಸಾಧು ಮಾಡೋಣ ಅಂತ ಹಿಡಿಯಲು ಹೋದರೆ ಪುರ್ ಅಂತ ಹಾರಿಬಿಡುತ್ತಿದ್ದವು. 'ಕಿರುಕೊಟ್ಟ'ದ ಹಾವಳಿ ಅಲ್ಲಿ ಹೆಚ್ಚಾಗಿದ್ದು ನಾಡುಕೋಳಿಯ ಮರಿಗಳಲ್ಲಿ ಕೆಲವನ್ನು ಅದು ಹಿಡಿದು ಹಾರಿ ಹೋಗಿದ್ದುಂಟು. ಆದರೆ ಕಾಡುಕೋಳಿ ಮರಿಗಳು ಮಾತ್ರ ಬಹು ಚುರುಕು. ಎಲೆ ಉದುರುವಾಗಲೂ ಆ ನೆರಳಿಗೇ ಹೆದರಿ ಅಡಗಿ ಬಿಡುತ್ತಿದ್ದವು. ಇನ್ನು ಕಿರುಕೊಟ್ಟಕ್ಕೇ ಸಿಗುವವೇ? (ಕಿರುಕೊಟ್ಟವೆಂದರೆ ಚೋರೆ ಹಕ್ಕಿಯ ಗಾತ್ರದ ಮಾಂಸಹಾರಿ ಹಕ್ಕಿ. ಇದನ್ನು ಚೋರೆ ಗಿಡುಗ ಎಂದೂ ಕರೆಯುತ್ತಾರೆ). ನಾನೂ ಅಕ್ಕನೂ ಸೇರಿ ಮುಕ್ಕಾಲು ಚಂದ್ರನಾಕಾರದ ಮಣ್ಣಿನ ಒಂದು ಕೋಳಿ ಗೂಡನ್ನು ಮಾಡಿದೆವು. ಆ ಗೂಡಿನೊಳಗೆ ನಾಡುಕೋಳಿಗಳು ಸಂಜೆಯಾಗುತ್ತಲೇ ಬಂದು ಕೂಡಿ ಕೊಳ್ಳುತ್ತಿದ್ದವು. ಆದರೆ ಕಾಡುಕೋಳಿಗಳು ಕತ್ತಲಾದ ಮೇಲೆ ಮೆಲ್ಲ ಮೆಲ್ಲನೆ ಬಂದು ಗೂಡನ್ನು ಅನುಮಾನದಿಂದಲೇ ನೋಡಿ ಹಿಂತಿರುಗಿ ಮತ್ತೆ ಬಂದು ನೋಡಿ ಅತ್ತಿತ್ತ ಇಣುಕಿ ನುಗ್ಗುತ್ತಿದ್ದವು. ಬೆಳಿಗ್ಗೆ ಮೊದಲೇ ಹೊರಬಂದು ಬಿಡುತ್ತಿದ್ದವು. ಸದಾ ಕಾಡಿನತ್ತಲೇ ಹೋಗಿ ಕೆದಕಿ ಬೆದಕಿಯೇ ಮೇಚಿ ಮಾಡುತ್ತಿದ್ದವು. ನಮ್ಮ ಕೈ ಮೇಚಿಗಿಂತಲೂ ಕಾಡಿನ ಮೇಚಿಯನ್ನೇ ಇಷ್ಟಪಡುತ್ತಿದ್ದವು. ಅವಾಗಿಯೇ ಬಂದು ನೀರು ಕುಡಿದುದನ್ನು ನಾನು ನೋಡಲಿಲ್ಲ. ಹೀಗೆ, ದಿನ ಕಳೆಯುತ್ತಿರಲು ಸಂಜೆ ಗೂಡಿನಲ್ಲಿ ಕೂಡುವ ಬದಲು ಗೂಡಿನ ಮೇಲಿದ್ದ ಅಡ್ಡ ಮರದಲ್ಲಿ ಕುಳಿತುಕೊಳ್ಳಲು ಶುರುಮಾಡಿದವು. ನಮ್ಮನ್ನು ಕಂಡೊಡನೆ ಓಡುವ ಹವ್ಯಾಸ ಹೆಚ್ಚಾಗತೊಡಗಿತು. ಕೆಲವೊಮ್ಮೆ ಗಿಡದ ಮೇಲೆ ಹಾರಿ

ಕುಳಿತುಬಿಡುತ್ತಿದ್ದವು. ಈಗ ಇವುಗಳ ದಿನಚರಿ ಬದಲಾಗತೊಡಗಿತು. ಸಂಜೆಯಾಮತ್ತೂ ಗೂಡಿನ ಮೇಲಿದ್ದ ಅಡ್ಡ ಮರದಲ್ಲಿ ಕುಳಿತುಕೊಳ್ಳುತ್ತಿದ್ದ ಕೋಳಿಗಳು ಈಗ ನಮ್ಮ ಮನೆಯ ಹಿಂದೆ ಇದ್ದ ಬಿದಿರ ಮೆಳೆಯಲ್ಲಿ ಕೂರಲು ಶುರುಮಾಡಿದವು. ಗೂಡಿನತ್ತ ಬರುವುದನ್ನು ಬಿಟ್ಟೇ ಬಿಟ್ಟವು. ಹೀಗೆ ಸಂಜೆ ಬಿದರ ಮೆಳೆಯಲ್ಲಿ ಕುಳಿತು ಬೆಳಿಗ್ಗೆ ಮನೆಯ ಕಡೆ ಬರುತ್ತಿದ್ದ ಈ ಕೋಳಿಗಳ ಬಗ್ಗೆ ನನಗೆ ಅನುಮಾನ ಶುರುವಾಯಿತು.

ಈಗ ಆ ನಾಲ್ಕು ಮರಿಗಳಲ್ಲಿ ಕೆಲವು 'ಕೆಕ್ ಕೆಕ್' ಅಂತ ಸಣ್ಣ ಧ್ವನಿಯಲ್ಲಿ ಕೂಗಲು ಪ್ರಾರಂಭ ಮಾಡಿದ್ದವು. ನಾನು ಕುಣಿದಾಡಿದೆ.

ಇನ್ನು ಕೆಲವೇ ತಿಂಗಳಲ್ಲಿ ಒಂದು ಹುಂಜವಂತೂ 'ತೆಕ್ಕೂರ್ ತೇರ್‌ತೆಕ್' ಅಂತ ಕೂಗುತ್ತದೆ. ಆವಾಗ ನಾನು ಊರವರೊಡನೆ ಹೇಳಿಕೊಂಡು ಮೆರೆಯುತ್ತೇನೆಂದುಕೊಂಡೆ. ಅಷ್ಟರಲ್ಲಿ ಅಪ್ಪ ಹೇಳಿದರು. "ನಿನಗೆ ಅವು ಖಂಡಿತ ದಕ್ಕೋದಿಲ್ಲ, ಹಿಡಿದು ಅಚ್‌ಕಟ್ ಮಾಡು". ನನಗೆ ಅವುಗಳನ್ನು ಕೊಲ್ಲುವ ಮನಸ್ಸಾಗಲಿಲ್ಲ. ಅಂಥಾ ಹೂ ಪಿಳ್ಳೆಗಳನ್ನು ತಂದು ಸಾಕಿ ಈಗ ಲಾಕಿಗಳೋ ಕಡತಗಳೋ ಆಗುತ್ತಿರುವಾಗ ಕೊಂದು ತಿನ್ನೋದೆ? ಸಾಧ್ಯವಿಲ್ಲಾಂತ ಹಠ ಹಿಡಿದೆ. ಒಂದು ದಿನ ಬೆಳಿಗ್ಗೆ ಮನೆಯ ಸಮೀಪ ಕಾಡು ಕೋಳಿಯೊಂದು ಕೂಗಿತು. ಆಗ ಈ ನಾಲ್ಕು ಕೋಳಿಗಳೂ ಮೇಚಿ ಮಾಡುವುದನ್ನು ಬಿಟ್ಟು ತಲೆಯೆತ್ತಿ ಆ ಸದ್ದು ಬಂದೆಡೆ ನೋಡತೊಡಗಿದವು. ಅಷ್ಟೇ ಅಲ್ಲ ಹತ್ತಾರು ಹೆಜ್ಜೆ ಅತ್ತ ಕಡೆಗೇ ಹೋದವು. ನಾನಂತೂ ಆ ದೃಶ್ಯ ನೋಡಿ ತಬ್ಬಿಬ್ಬಾದೆ. ಕೂಡಲೆ 'ಬಾಬಾ' ಅಂತ ಕರೆದು ಕಾಳು ತಂದು ಎರಚಿದೆ. ಸಧ್ಯ ಎಲ್ಲವೂ ಇತ್ತ ಹಾರಿ ಬಂದವು. ಇದಾಗಿ ಒಂದು ಹದಿನೈದು ದಿನ ಕಳೆದಿರಬಹುದು. ನಾನು ಶಾಲೆಯಿಂದ ಹಿಂದಿರುಗಿದಾಗ ಎರಡು ಕೋಳಿಗಳು ಪಲಾಯನ ಮಾಡಿದ್ದವು ! ಉಳಿದೆರಡು ಮಾತ್ರ ಮಾಮೂಲಿಯಂತೆ ಬಿದಿರ ಮೆಳೆಯಲ್ಲೇ ಕುಳಿತು ಮನೆಯತ್ತ ಬರುತ್ತಿದ್ದವು.

ಓಹೋ ! ಕೆಲಸ ಕೆಡುತ್ತದೆ. ಹೀಗೆ ಬಿಟ್ಟರೆ ಆಗುವುದಿಲ್ಲ ವೆಂದುಕೊಂಡು ಒಂದು ಸಂಜೆ ಎದ್ದು ಬಿದ್ದು, ಓಡಿಸಿ, ಹಾರಿಸಿ ಸುಸ್ತು ಮಾಡಿ ಆ ಉಳಿದಿದ್ದ ಎರಡನ್ನು ಗೂಡಿನೊಳಗೆ ಕೂಡಿದೆವು. ಆ ಎರಡನ್ನೂ ಹಿಡಿದುಕೊಂಡೆ. ಕಾಲಿಗೆ ಹಗ್ಗ ಹಾಕಿ ಗೂಟಕ್ಕೆ ಕಟ್ಟಿದೆ. ಅವುಗಳು ಸ್ವಾತಂತ್ರವನ್ನು ಕಳೆದುಕೊಂಡವು. ಕಟ್ಟಿದ್ದಲ್ಲಿಗೇ ಕಾಳುಹಾಕಿ ನೀರಿಡುತ್ತಿದ್ದೆ. ರಜಾ ದಿನಗಳಲ್ಲಿ ಸ್ಥಳ ಬದಲಿಸಿ ಕಟ್ಟುತ್ತಿದ್ದೆ. ಹೀಗೆ ಒಂದೆರಡು ವಾರ ಕಳೆದಿರಬಹುದು. ಒಂದು ಕೋಳಿ ಹಗ್ಗದಿಂದ ಕಾಲು ಜಾರಿಸಿಕೊಂಡು ಹಾರಿ ಹೋಯಿತು. ನನ್ನ ಪಾಲಿಗೆ ಒಂದೇ ಒಂದು ಕೋಳಿ ಉಳಿಯಿತು. ಇದನ್ನಾದರೂ ಕಣ್ಣಲ್ಲಿ ಕಣ್ಣಿಟ್ಟು ಸಾಕುತ್ತೇನೆಂದು, ಅದು ಜಾರಿಸಿಕೊಳ್ಳದಂತೆ ಹಗ್ಗದ ಗಂಟನ್ನು ಬಿಗಿಗೊಳಿಸಿದೆ. ಮನೆಯ ಹಿಂದೆ ಜಗಲಿಯಲ್ಲಿ ಒಂದು ಗೂಟಕ್ಕೆ ಕಟ್ಟಿ ಎಂದಿನಂತೆ ನೀರಿಟ್ಟು ಅಕ್ಕಿ, ಬತ್ತ, ರಾಗಿ, ನುಚ್ಚು, ತೌಡು ಹಾಕುತ್ತಿದ್ದೆ. ಈ ಕೋಳಿ ನಿಜವಾಗಿಯೂ ಲಾಕಿಯೇ ಹೌದು ! (ಅರೆ ಬೆಳೆದ ಹುಂಜ) ಸಧ್ಯ ಕಡತವಾಗಿರಲಿಲ್ಲ (ಅರೆ ಬಳೆದ ಹೇಂಟೆ) ಈ ಲಾಕಿಯ ಕೆಂಪಾದ ಸಣ್ಣ ಜುಟ್ಟು, ಕುತ್ತಿಗೆಯ ಮೇಲಿನ ತುಪ್ಪಟದಲ್ಲಿ ರಂಗುರಂಗಿನ ಸಣ್ಣಗೆರೆ, ಕಾಲಿನಲ್ಲಿ ಮುಳ್ಳು ಹುಟ್ಟುವಲ್ಲಿ ಸಣ್ಣ ಮೊಗ್ಗು ! ಇನ್ನೇನು ಒಂದೆರಡು ತಿಂಗಳಲ್ಲಿ 'ತೆಕ್ಕೂರ್ ತೇರ್‌ತೆಕ್' ಅಂತ ಕೂಗುತ್ತದೆ. ಅಷ್ಟರಲ್ಲಿ ಕಾಲಿನ ಮುಳ್ಳುಕೂಡ ಬಂದಿರುತ್ತದೆ. ಅಬ್ಬಾ ! ಆ ಕೂಗುವ ದಿನ..... ರಾತ್ರಿಯಿಡೀ ಅದೇ ಅದೇ ಯೋಚನೆ.

ಈ ಕೋಳಿಗೆ ಕಾಳು ಹಾಕುವಾಗ ನೀರಿಡುವಾಗ ಅತ್ತಿತ್ತಾ ಓಡುತಿತ್ತು. ಕಟ್ಟಿ ಹಾಕಿದರೂ ಕೈಗೆ ಸಿಗದು. ಈ ಪೇಚಾಟವನ್ನು ನೋಡಿದ ಅಪ್ಪ ವ್ಯಂಗ್ಯವಾಗಿ ನಕ್ಕಿದ್ದೂ ಉಂಟು. ನನಗೆ ಈ ಕೋಳಿಯ ಮೇಲೆ ಅನುಮಾನ. ಅದರ ಕಾಲಿಗೆ ಹಗ್ಗ ಹಾಕಿ ಸುಮಾರು ಒಂದೆರಡು ತಿಂಗಳೇ ಆಗಿರಬಹುದು. ಅದೋ ನಿಂತಲ್ಲಿ ನಿಲ್ಲದೆ ಸದಾ ತನ್ನ ಕಾಲನ್ನು ಎಳೆದುಕೊಳ್ಳುತ್ತಾ ಇತ್ತು. ಹಾಗೆ ಎಳೆದೂ ಎಳೆದೂ ಒಂದು ಕಾಲು ಉದ್ದವಾಗಿಬಿಟ್ಟರೆ ಜನ ನೋಡಿ ನಕ್ಕಾರು. ಒಂದು ಕಾಲು ಉದ್ದ, ಮತ್ತೊಂದು ಕಾಲು ಗಿಡ್ಡವಾಗಿರುವ ಆ ನನ್ನ ಕೋಳಿ ನಡೆಯುವುದನ್ನು ನಾನಾದರೂ ಹೇಗೆ ನೋಡಲಿ ಎಂದು ನೊಂದುಕೊಂಡೆ.

ಅಂದು ಶನಿವಾರವಿರಬೇಕು. ಶಾಲೆಯಿಂದ ಬಂದವನೇ ಗಬಗಬನೆ ತಿಂದೆ. ಕೋಳಿಯ ಹತ್ತಿರ ಹೋಗಬೇಕೆಂದು ಅತ್ತ ಹೊರಟೆ. ಏನೋ ಕೂಗುವ ಸದ್ದು. ಅದು ಮತ್ತ್ಯಾವುದೂ ಅಲ್ಲ. ನನ್ನ ಕೋಳಿ ! ಈ ಕಾಡು ಕೋಳಿ 'ಕೆಕ್ ಕೆಕ್ ಕೆಕ್' ಎನ್ನುತ್ತ ನಾಲ್ಕಾರು ಬಾರಿ ಕೂಗಿಕೊಂಡಿತು. ನಾನು ಮರೆಯಾಗಿ ನಿಂತಿದ್ದೆ. ಮತ್ತೆ ಕೋಳಿಯ ಹತ್ತಿರ ಹೋದೆ. ಅದು ಕೂಗುವುದನ್ನು ನಿಲ್ಲಿಸಿಬಿಟ್ಟಿತ್ತು. ನನ್ನನ್ನು ನೋಡಿದೊಡನೆ ಹಾರಲು ಯತ್ನಿಸಿತು. ನೀರಿಟ್ಟೆ, ಮುಟ್ಟಲಿಲ್ಲ. ಕಾಳು ಹಾಕಿದೆ, ಹೆಕ್ಕಲಿಲ್ಲ. ಓ ! ಇದಕ್ಕೆ ಜ್ವರಗಿರ ಬಂತಾ ಎನ್ನುತ್ತ ಅದನ್ನು ಹಿಡಿದುಕೊಂಡೆ. ಕೋಳಿ ಕೊಸರಾಡಿತು. ಮೈ ನಡುಗಿಸಿತು. ರೆಕ್ಕೆಯೊಳಗೆ ಕೈಯಿಟ್ಟೆ. ಕೋಳಿಯ ಮೈ ಎಷ್ಟಾದರೂ ಬಿಸಿತಾನೆ? ಆದರೆ ಈ ಕೋಳಿಯ ಮೈ ಇನ್ನೂ ಬಿಸಿಯಾದಂತೆ ನನಗನ್ನಿಸಿತು. ಹಗ್ಗ ಹಾಕಿದ್ದ ಕಾಲನ್ನು ಮುಟ್ಟಿದೆ. ಸದಾ ಕಾಲು ಎಳೆದೂ ಆ ಎಳೆದಾಡಿದ ಜಾಗ ಕಪ್ಪಾಗಿತ್ತು. ಅಯ್ಯೋ ಪಾಪ ಎನ್ನುತ್ತ ಆ ಕಾಲಿನ ಹಗ್ಗವನ್ನು ಸಡಲಿಸಿ ಬೇರೆ ಕಾಲಿಗೆ ಹಾಕುತ್ತೇನೆಂದುಕೊಂಡೆ. ಅದರ ಮೈಯನ್ನೊಮ್ಮೆ ಸವರಿದೆ. ಕತ್ತಿನ ರಂಗುರಂಗಿನ ತುಪ್ಪಟದ ಭಾಗಕ್ಕೆ ಮುತ್ತಿಟ್ಟೆ. ಅದರ ಬೆನ್ನನ್ನು ಕೆನ್ನೆಗೆ ಮುಟ್ಟಿಸಿಕೊಂಡೆ. ಹೊಳೆ ಹೊಳೆವ ತುಪ್ಪಟ, ಬಾಗಿದ ಪುಕ್ಕ, ಕಾಲಿನ ಮುಳ್ಳು, ಕೆಂಬಣ್ಣದ ಜುಟ್ಟು, ಗಡ್ಡ ಬೇಗನೇ ಬರಲಿ ಎಂದು ಹಾರೈಸಿದೆ. ನಾನು ಇನ್ನೂ ಇದರ ಕಾಲಿನ ಹಗ್ಗವನ್ನು ಸಡಿಲಿಸಿರಲಿಲ್ಲ. ಈಗ ಹಗ್ಗವನ್ನು ಸಡಿಲಿಸಿ ಬಿಚ್ಚಿದೆ. ಮತ್ತೊಂದು ಕಾಲಿಗೆ ಇನ್ನೇನು ಉರುಳು ಸೇರಿಸಬೇಕೆನ್ನುವಷ್ಟರಲ್ಲಿ ಆ ಕಾಡುಕೋಳಿ ನನ್ನ ಕೈಯಿಂದ ತಪ್ಪಿಸಿಕೊಂಡಿತು. ಅಷ್ಟು ದೂರ ಓಡಿತು. ನನಗೆ ಏನು ಮಾಡಲೂ ತೋಚಲಿಲ್ಲ. ಎದ್ದೆ. ಎದ್ದು ನಿಂತು ಅತ್ತ ನೋಡಿದೆ. ಅದರತ್ತ ಓಡಿದೆ. ಅದು ಮತ್ತೂ ಅತ್ತ ಓಡಿತು. "ಕೋಳಿ ಬಾ ಬಾ ಬಾ......" ಅಂತ ಕೂಗಿದೆ. ಮತ್ತೆ ಅದು ಇನ್ನೂ ಆಚೆ ಕಾಡಿನತ್ತ ಓಡಿತು. ನಾನೂ ಓಡಿದೆ. ಅದು ರೆಕ್ಕೆ ಬಡಿದು ಹಾರಿತು. ಒಂದು ರೆಂಬೆಯ ಮೇಲೆ ಕುಳಿತು ಅತ್ತಿತ್ತ ನೋಡಿತು. ನಾನು "ಬಾ ಬಾ....." ಅಂತಲೇ ಇದ್ದೆ. ಅದು ಅಲ್ಲಿಂದಲೂ ಹಾರಿತು. ಹಾರಿಯೇ ಹೋಯಿತು. ಹಾಗೆ ಹಾರಿದಾಗ ಅದರ ರೆಕ್ಕೆಯ ಗಾಳಿ ಕಮ್ಯುನಿಸ್ಟ್ ಗಿಡಕ್ಕೆ ಬಡಿಯಿತು. ಗಿಡ ಅತ್ತಿತ್ತ ಅಲುಗಿತು.

ಪೂರ್ವಾಗ್ನೇಯದ ದ್ವಾರ - ಚೋರಾಗ್ನಿ ಭಯ, ಸ್ತ್ರೀಯರ ರೋಗಕ್ಕೆ ಆಗರ

# ಬೊಜ್ಜ : ಸಾವಿನ ಸಾಂಕೇತಿಕ ಪ್ರತಿನಿಧೀಕರಣ

– ಡಾ. ಪುರುಷೋತ್ತಮ ಬಿಳಿಮಲೆ, ನವದೆಹಲಿ

ಹಿಂದಿನ ಸಂಚಿಕೆಯಿಂದ

ಸಾವು ಸಂಭವಿಸಿದಲ್ಲಿಂದ ಮುಂದೆ 16ನೇ ದಿವಸ ದವರೆಗೆ ಕಾಲವನ್ನು ಮೈಲಿಗೆಯಾಗಿಸಿ, ಅಪವಿತ್ರಗೊಳಿಸಲಾಗುವುದು. ಗಡ್ಡ-ಮೀಸೆ ಬೋಳಿಸಿ ಬಿಳಿ ಬಟ್ಟೆ ಉಡಿಸಿ ಮೃತನ ಕುಟುಂಬದವರನ್ನು ಇತರರಿಂದ ಪ್ರತ್ಯೇಕಿಸಿ, ಮೈಲಿಗೆಯನ್ನು ಕಳೆದುಕೊಳ್ಳಲು ಸಿದ್ಧಗೊಳಿಸಲಾಗುವುದು. ಮಡಿವಾಳನೂ ಮೈಲಿಗೆ ಕಳೆಯುವ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾನೆ. ಮನೆಯೊಳಗಿನ ಅಡುಗೆ ಮನೆಯಲ್ಲಿರಿಸಲಾದ ಕನ್ನಿಕಂಬವನ್ನು ಕೇಂದ್ರವಾಗಿರಿಸಿಕೊಂಡು ಇಡೀ ಮನೆಯ ಜಾಗವನ್ನು ಸಾವಿನ ಆವರಣವೆಂದು ಪರಿಗಣಿಸಲಾಗುವುದು. ವ್ಯಕ್ತಿಗಳು ಸೇವಿಸುವ ಆಹಾರದಲ್ಲಿಯೂ ಅಂಥ ವ್ಯತ್ಯಾಸಗಳಿರುತ್ತವೆ. 16ನೇ ದಿವಸದಂದು ಈ ಮಧ್ಯಂತರ ಜಗತ್ತಿನ ಸೀಮಾರೇಖೆಗಳು ಅಳಿಸಿಹೋಗುತ್ತವೆ.

ಮಧ್ಯಂತರ ಜಗತ್ತಿನಲ್ಲಿ ಬಳಸಲಾಗುವ ಎಲ್ಲ ವಸ್ತುಗಳು ವಾಸ್ತವ ಲೋಕಕ್ಕೆ ಸೇರಿದವೇ ಆಗಿವೆ. ಆದರೆ ಅವನ್ನು ಇರುವ ರೀತಿಯಲ್ಲಿ ಬಳಸುವುದಿಲ್ಲ. ಬದಲಾಗಿ ತಿರುವು ಮುರುವಾಗಿಸಿ ಬಳಸಲಾಗುವುದು. ಅಡಿಮೇಲಾಗಿಸಿದ ಅಂಗಿ, ಎಡಗೈ ಬಳಕೆ, ಅಪ್ರದಕ್ಷಿಣೆ ದಕ್ಷಿಣ ದಿಕ್ಕಿಗೆ ಪ್ರಾಶಸ್ತ್ಯ-ಇತ್ಯಾದಿಗಳನ್ನು ನೆನಪಿಸಿಕೊಳ್ಳಬಹುದು. 16ನೇ ದಿವಸದ ಅನಂತರ ಮತ್ತೆ ಅವೆಲ್ಲ ವಾಸ್ತವ ಲೋಕಕ್ಕೆ ಹಿಂದಿರುಗುತ್ತವೆ.

ಸಾವು ಒಂದು ನೈಜ ಘಟನೆ. ಸತ್ತ ವ್ಯಕ್ತಿಯು ನೈಜ ಲೋಕದೊಂದಿಗೂ ತನ್ನ ಎಲ್ಲ ಸಂಬಂಧಗಳನ್ನು ಮತ್ತೆಂದೂ ಸ್ಥಾಪಿಸಿಕೊಳ್ಳಲಾರದ ರೀತಿಯಲ್ಲಿ ಕಡಿದುಕೊಂಡಿರುತ್ತಾನೆ. ಇದರಿಂದಾಗಿ ಆತ ಬದುಕಿದ್ದಾಗ ಏರ್ಪಡಿಸಿಕೊಂಡಿದ್ದ ಸಂಬಂಧಗಳೆಲ್ಲ ಸಾವಿನಲ್ಲಿ ಅಸ್ತವ್ಯಸ್ತಗೊಳ್ಳುತ್ತವೆ. ಕುಟುಂಬದ ನಿಯಾಮಕತೆಗಳೆಲ್ಲ ಸಡಿಲಿ ಹೋಗಿ ಅಲ್ಲಿ ವಿಚಿತ್ರವಾದ ಏರುಪೇರು ಉಂಟಾಗುತ್ತದೆ. ಇಂಥ ಬಿಕ್ಕಟ್ಟಿನ ಗಳಿಗೆಯಲ್ಲಿ ನೈಜಲೋಕ ಕಳೆದುಕೊಂಡದ್ದನ್ನು, ಸೈದ್ಧಾಂತಿಕವಾಗಿ ಪುನರ್ ನಿರ್ಮಿಸಿಕೊಂಡು, ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಸಂಸ್ಕೃತಿಯೊಂದಕ್ಕೆ ಸಾವಿನ ಸಂದರ್ಭದಲ್ಲಿ ಮಧ್ಯಂತರ ಜಗತ್ತು ಬೇಕಾದ್ದೇ ಈ ಪುನರ್ ಹೊಂದಾಣಿಕೆಗಾಗಿ. ಇದು ಕುಟುಂಬವೊಂದರಲ್ಲಿ ಸಾವಿನ ಕಾರಣವಾಗಿ ಕಾಣಿಸಿಕೊಂಡ ಅಸ್ತವ್ಯಸ್ತತೆಯನ್ನು ತಾತ್ಕಾಲಿಕವಾಗಿ ಪರಿಹರಿಸುತ್ತದೆ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಏರುಪೇರುಗಳನ್ನು ಒಂದು ರಾಜೀಸೂತ್ರದ ಮೂಲಕ ಅದು ಶಮನಗೊಳಿಸುತ್ತದೆ. ಮುಂದೆ ಕಳಕೊಂಡಾಗ ಉಂಟಾದ ಸ್ಥಿತಿಯೇ ಒಂದು ವ್ಯವಸ್ಥೆಯಾಗಿ ಮಾರ್ಪಟ್ಟು, ಸಮಸ್ಯೆ ಇತ್ಯರ್ಥಗೊಳ್ಳಬಹುದು. ಇಲ್ಲವೇ ಬೇರೊಬ್ಬ ವ್ಯಕ್ತಿ ಆ ಸ್ಥಾನವನ್ನು ಆಕ್ರಮಿಸಿಕೊಂಡು ಕೊರತೆಯನ್ನು ತುಂಬಬಹುದು. ಏನಿದ್ದರೂ ಸಾವು ಉಂಟು ಮಾಡಿದ ಒಂದು ಬಗೆಯ ಶೂನ್ಯವನ್ನು ಮಧ್ಯಂತರ ಜಗತ್ತು ತುಂಬಿಕೊಡುತ್ತದೆ ಎಂಬುದು ಸದ್ಯಕ್ಕೆ ಮುಖ್ಯವಾದ ಸಂಗತಿಯಾಗಿದೆ. ಕುಟುಂಬವೊಂದರ ಸ್ವಾಸ್ಥ್ಯದ ಉಳಿಕೆಗೆ ಇಂಥ ಪರಿಕಲ್ಪನೆಗಳು ಅವಶ್ಯಕ.

### ಹದಿನಾರು ಕೋಲೆಗಳು :

ಈಗಾಗಲೇ ಸ್ಪಷ್ಟಪಡಿಸಿರುವಂತೆ ಸತ್ತ ಮೇಲೆಯೂ ಕುಟುಂಬದ ಅಲೌಕಿಕ ಸದಸ್ಯನಾಗಿ ಮುಂದುವರೆಯುವ ಶಕ್ತಿಯೇ 'ಕೋಲೆ'. ಗೌಡರು ಹೀಗೆ ಅಸ್ತಿತ್ವದಲ್ಲಿರುವ ಕೋಲೆಗಳ ಸಂಖ್ಯೆಯನ್ನು ಒಟ್ಟು 16 ಎಂದು ಭಾವಿಸುತ್ತಾರೆ. ಈ ಕೋಲೆಗಳಿಗೆ 'ಕಾರಣವರ್' ಅಥವಾ 'ಹಿರಿಯರು' ಎಂಬ ಹೆಸರೂ ಇದೆ. 16 ಕೋಲೆಗಳ ಅಸ್ತಿತ್ವದ ಕಲ್ಪನೆ ಬ್ರಾಹ್ಮಣೇತರರಲ್ಲೆಲ್ಲಾ ಇರುವಂತೆ ತೋರುತ್ತದೆ. ಬ್ರಾಹ್ಮಣರಲ್ಲಿ ಕಂಡುಬರುವ ಪಿತೃ ದೇವತೆಗಳ ಸಂಖ್ಯೆ ಮೂರು. ವಸು, ರುದ್ರ, ಆದಿತ್ಯರೆಂದು ಇವನ್ನು ಗುರುತಿಸಲಾಗುತ್ತದೆ. ಇವರು ಕ್ರಮವಾಗಿ ಮೇಲಿನ ಮೂರು ತಲೆಮಾರುಗಳನ್ನು ಪ್ರತಿನಿಧಿಸುತ್ತಾರೆ. "ಹೊಸದಾಗಿ ಸತ್ತ ವ್ಯಕ್ತಿಯನ್ನು ಮೂವರು ಪಿತೃದೇವತೆಗಳೊಂದಿಗೆ ವಿಲೀನಗೊಳಿಸಿ, ಅತ್ಯಂತ ಹಿರಿಯನನ್ನು ಕೈಬಿಟ್ಟು, ಹೊಸದಾಗಿ ಸತ್ತ ವ್ಯಕ್ತಿಯನ್ನು ವಸು ಎಂದು ಪರಿಗಣಿಸಲಾಗುತ್ತದೆ. ಹಾಗೂ ಮತ್ತೊಬ್ಬರಿಗೆ ರುದ್ರ ಮತ್ತು ಆದಿತ್ಯರಾಗಿ ಸ್ಥಾನದಲ್ಲಿ ಏರಿಕೆ ಆಗುತ್ತದೆ. 'ಸಪಿಂಡೀಕರಣ ಶ್ರಾದ್ಧ' ಎಂಬ ವಿಧಿ ಈ ರೀತಿ ಪಿತೃದೇವತೆಗಳ ಸಂಖ್ಯೆ ಯಾವಾಗಲೂ ಮೂರರಲ್ಲಿಯೇ ಇರುವಂತೆ ಮಾಡುತ್ತದೆ" (ಸತ್ಯನಾಥ್ 1988 : 201). ಸತ್ತವರೊಡನೆ ಸೇರಿಸುವ ಪ್ರಕ್ರಿಯೆ ಮಾತ್ರ ಎರಡೂ ಕಡೆ ಸಾಮಾನ್ಯವಾಗಿರುವಂತೆ ಕಂಡರೂ ಒಟ್ಟು ಪಿತೃಗಳ ಸಂಖ್ಯೆಯಲ್ಲಿ ಮಾತ್ರ ಗಮನಾರ್ಹ ವ್ಯತ್ಯಾಸ ತೋರುತ್ತದೆ.

ಈ 'ಹದಿನಾರು' ಸಂಖ್ಯೆಯ ಮಹತ್ವವನ್ನು ಮತ್ತು ಅದರ ಔಚಿತ್ಯವನ್ನು ವಿವರಿಸುವುದು ಕಷ್ಟ. ಮೃತನ ಕೋಲೆ ಅಸ್ತಿತ್ವದಲ್ಲಿರುವುದು ಹದಿನಾರು ದಿನಗಳ ಕಾಲ. ಅಂದರೆ ಹದಿನೈದು ಪೂರ್ಣ ದಿನಗಳು ಮತ್ತು ಹದಿನಾರನೇ ದಿವಸದಂದು ಅದರ ಅಸ್ತಿತ್ವ ನಶಿಸುತ್ತದೆ. ಕುಟುಂಬದಲ್ಲಿ ವಾಸಿಸುತ್ತಿರುವ ಹಿರಿಯ 'ಕೋಲೆ'ಗಳ ಒಟ್ಟು ಸಂಖ್ಯೆಯೂ ಹದಿನಾರೇ. ಬಹುಶಃ ಈ ಸಂಖ್ಯೆಯು ಚಂದ್ರನ ಹದಿನೈದು ದಿನಗಳವರೆಗೂ ವೃದ್ಧಿ ಅಥವಾ ಕ್ಷಯವನ್ನು ಆಧರಿಸಿ ಬೆಳೆಸಿಕೊಂಡು ಬಂದ ಸೈದ್ಧಾಂತಿಕ ಕಲ್ಪನೆ ಎಂದು ತೋರುತ್ತದೆ. ಚಂದ್ರನ ಪೂರ್ಣ ವೃದ್ಧಿ ಅಥವಾ ಪೂರ್ಣ ಕ್ಷಯವನ್ನು ಹದಿನೈದು ದಿವಸಗಳ ಒಂದು ಪೂರ್ಣ ಘಟಕವೆಂದು ಭಾವಿಸಿದರೆ, ಆಗ ಹದಿನಾರನೆ ದಿವಸವು ಹೊಸತಾದ, ಹಳೆಯದಕ್ಕಿಂತ ಪೂರ್ತಿ ಬೇರೆಯದಾದ ಮತ್ತು ಪ್ರತ್ಯೇಕಿತ ಕಾಲವಾಗಿ ಬಿಡುತ್ತದೆ. ಕಾಲದ ಬಗೆಗೂ ಈ ಸೈದ್ಧಾಂತಿಕ ಕಲ್ಪನೆಯು 'ಕೋಲೆ'ಯ ಹದಿನಾರು ದಿನಗಳ ಅಸ್ತಿತ್ವವನ್ನು ಆಗು ಮಾಡಿದೆ ಮತ್ತು ಮಧ್ಯಂತರ ಜಗತ್ತಿನ ಸೀಮಾರೇಖೆಗಳನ್ನು ಹದಿನಾರು ದಿನಗಳಿಗೆ ಸ್ಥಾಪಿಸಿದೆ. ಚಂದ್ರನನ್ನು ಆಧರಿಸಿ ಕಾಲದ ಕಲ್ಪನೆಯನ್ನು ರೂಢಿಸಿಕೊಂಡು ಬಂದ ಜನ ಸಮುದಾಯಗಳಲ್ಲಿ ಹದಿನಾರಕ್ಕೆ ಪ್ರಾಮುಖ್ಯತೆ ಬರಲು, ಚಂದ್ರನ ವೃದ್ಧಿ ಮತ್ತು ಕ್ಷಯಗಳೇ ಕಾರಣವಾಗಿದೆ. ಈ ಅರ್ಥದಲ್ಲಿ ಬ್ರಾಹ್ಮಣರಲ್ಲಿರುವ ಪಿತೃಕಲ್ಪನೆ ಮತ್ತು ಗೌಡರಲ್ಲಿರುವ 'ಕೋಲೆ'ಗಳ ಕಲ್ಪನೆಯನ್ನು ಭಿನ್ನ ಭಿನ್ನವಾಗಿಯೇ ಅರ್ಥಮಾಡಿಕೊಳ್ಳಬೇಕಾದ ಅಗತ್ಯವಿದೆ.

## ಕುಟುಂಬ ಮತ್ತು ರಕ್ತಬಾಂಧವ್ಯ

ವ್ಯಕ್ತಿಯ ಸಾವು ವೈಯಕ್ತಿಕವಾಗಿ ಕುಟುಂಬವೊಂದಕ್ಕೆ ಸಂಬಂಧಿಸಿದ್ದರೂ, ಅದಕ್ಕೂ ಮೀರಿದಂತೆ ಅದು ಸಮಾಜದ ಆಗು ಹೋಗುಗಳಿಗೆ ಸಂಬಂಧಿಸಿದ್ದೆಂದು ವಿದ್ವಾಂಸರು ವಾದಿಸುತ್ತಾರೆ. (ಸತ್ಯನಾತ್ 1988). ಸಮಾಜದ ಆರ್ಥಿಕ, ರಾಜಕೀಯ ಚಟುವಟಿಕೆಗಳ ಭಾಗವಾಗಿದ್ದ ವ್ಯಕ್ತಿಯ ಸಾವು ಸಮಾಜಕ್ಕೊಂದು ನಷ್ಟ, ಹೌದಾದರೂ ಸೂಕ್ಷ್ಮವಾಗಿ ಅದು ಕುಟುಂಬಕ್ಕಾದ ನಷ್ಟವೆಂದೇ ತೋರುತ್ತದೆ. ಗೌಡರ ಅಂತ್ಯ ಸಂಸ್ಕಾರದ ವಿಧಿಗಳಲ್ಲಿ ಮೃತನ ರಕ್ತ ಬಾಂಧವರೇ ನಿರ್ಣಾಯಕ ಸ್ಥಾನ ವಹಿಸುತ್ತಾರೆ. ಈ ಅರ್ಥದಲ್ಲಿ ಇದು ಸಮಾಜಗಳು ರೂಪುಗೊಳ್ಳುವುದರ ಮುನ್ನ ಇದ್ದ ಬಂಧುತ್ವದ ವ್ಯವಸ್ಥೆಯನ್ನು ಸಂಕೇತಿಸುತ್ತದೆ. ಹೆಣವನ್ನು ಎತ್ತುವಲ್ಲಿಂದ ಆರಂಭವಾದರೆ ಹದಿನಾರರ ಕೊಲೆಯವರೆಗೆ ಎಲ್ಲ ಆಚರಣೆಗಳಲ್ಲೂ ಮೃತನ ತಮ್ಮ ಇಲ್ಲವೇ ಮಗನೇ ಮುಖ್ಯ ಪಾತ್ರ ವಹಿಸುತ್ತಾನೆ. ದೈಹಿಕವಾಗಿ ಆತ ಕೆಲವು ಬಗೆಯ ಕೆಲಸಗಳನ್ನು ಮಾಡಲು ಅಸಮರ್ಥನಾದಾಗಲೂ, ಸಾಂಕೇತಿಕವಾಗಿ ಆತನ ಕೈ ಮುಟ್ಟಿಸಿ, ಇತರರು ಆ ಕೆಲಸವನ್ನು ಮಾಡುತ್ತಾರೆ. ಉಳಿದಂತೆ ಸಾವಿನ ಸಂದರ್ಭಗಳಲ್ಲಿ ಬಳಕೆಯಾಗುವ ಬಿದಿರು ಮತ್ತು ಬಾಳೆ ಕೂಡಾ ಬಂಧುತ್ವದ ಭಾಗವಹಿಸುವಿಕೆಯನ್ನು ಇನ್ನಷ್ಟು ನಿಖರಗೊಳಿಸುತ್ತವೆ.

ಶವವನ್ನು ಸುಡ್ಮುಳಿಗೆ ಕೊಂಡೊಯ್ಯುವಾಗ ಮಾಡುವ 'ಚಟ್ಟ'ವನ್ನು ಬಿದಿರಿನಿಂದಲೇ ಮಾಡಬೇಕೆಂಬ ನಂಬಿಕೆಯಿದೆ. ಹಾಗೆ ದೂಪೆಯೆದುರು ಬಾಳೆಯನ್ನು ನೆಡುತ್ತಾರೆ ಮತ್ತು ಬೊಜ್ಜದೂಟದಲ್ಲಿ ಬಾಳೆಕಾಯಿಯನ್ನು ಕಡ್ಡಾಯವಾಗಿ ಬಳಸುತ್ತಾರೆ. ಇಲ್ಲಿ ಬಿದಿರು ಮತ್ತು ಬಾಳೆ ಎರಡೂ ಸಮಾನಾರ್ಥದಲ್ಲಿ ಬಳಕೆಯಾದಂತಿದೆ. ಅದೇಂದರೆ ಕುಲದ ಬಗೆಗೂ ಅತೀವ ಶ್ರದ್ಧೆ. ಬಿದಿರಿಗೆ ಒಂದು ಬೃಹತ್ತಾದ ಬುಡವಿದ್ದು, ಅದೇ ಬುಡದಿಂದ ಇತರ ಬಿದಿರುಗಳು ಕವಲೊಡೆಯುತ್ತವೆ. ಬಾಳೆಗಾದರೂ ಅಷ್ಟೇ. ಅದರ ಬುಡದಿಂದಲೇ ಅನೇಕ 'ಪಿಳ್ಳೆ'ಗಳು ಕವಲೊಡೆಯುತ್ತದೆ. 'ಒಂದೇ ಬುಡದಿಂದ ಹೊರಟ ಅನೇಕ ಕವಲುಗಳು' ಎಂಬ ಕಲ್ಪನೆಯು ಮಾನವನು 'ಕುಲ'ದ ಕಲ್ಪನೆಯನ್ನು ಚೆನ್ನಾಗಿ ಹೋಲುತ್ತದೆ. ಹೀಗೆ ನೋಡಿದಾಗ ಬಿದಿರು ಮತ್ತು ಬಾಳೆಗಳು ಕುಲದ ಬಗೆಗೂ ಮಾನವನ ಶ್ರದ್ಧೆಗೆ ಬಲಿಷ್ಠವಾದ ರೂಪಕವಾಗಿರುವಂತೆ ತೋರುತ್ತದೆ. ಗೌಡರ ಬಂಧುತ್ವದ ರೀತಿ-ನೀತಿಗಳು ಮತ್ತು ಅವರೆಲ್ಲ ತಮ್ಮ ಮೂಲ ಮನೆಗಳ ಬಗೆಗೆ ಹೊಂದಿರುವ ಭಾವುಕವಾದ ಸಂಬಂಧಗಳು ಅಂತಿಮವಾಗಿ ಕುಲದ ಬಗೆಗೂ ಅವರ ಶ್ರದ್ಧೆಯನ್ನೇ ವಿಶದೀಕರಿಸುತ್ತವೆ. ಹೀಗಾಗಿ ಗೌಡರಲ್ಲಿ ಸಂಭವಿಸಿದ ಒಂದು ಸಾವು ಅದರ ನಿಜವಾದ ಮತ್ತು ಆಚರಣೆಯ ಅರ್ಥದಲ್ಲಿ ಮೃತನ ಕುಟುಂಬಕ್ಕಾಗಿರುವ ನಷ್ಟವೇ ಹೊರತು ಸಮಾಜಕ್ಕಲ್ಲ.

## ಪುನರಾವರ್ತನೆಗೊಳ್ಳದ ಕಾಲ ಮತ್ತು ಹೆಣ

ವೀಣಾ ದಾಸ್, (Veena Das 1977), ಬ್ಲಾಕ್ ಮತ್ತು ಪೆರ್ರಿ (Black and Parry 1982) ಹರ್ಟ್ಜ್ (Hertz 1980), ಒಬಯಸೇಕರೆ (Obayasekere 1980), ಒಫ್ಲರ್ಟಿ (O'Flaherty 1980) ಪಾಟರ್ (Pother 1980) ಸತ್ಯನಾಥ್ (1988) ಮೊದಲಾದವರು ಶವಶಂಸ್ಕಾರದ ವಿಧಿಗಳನ್ನು ಯಜ್ಞಕ್ಕೆ ಸಂವಾದಿಯಾಗಿ ಪರಿಗಣಿಸಿದ್ದಾರೆ ಮತ್ತು ಚಕ್ರಾಕಾರದ ಕಾಲಕಲ್ಪನೆಯ ಮೂಲಕ ಸತ್ತವನನ್ನು ಮರುಹುಟ್ಟಿಗೆ ಒಳಪಡಿಸಲಾಗುವುದು ಎಂದೂ ವಾದಿಸುತ್ತಾರೆ. ಸತ್ಯನಾಥ್ ಹೀಗೆ ಬರೆಯುತ್ತಾರೆ. - ನಮ್ಮ ಮುಂದಿರುವ ಕಾಲ ನಮಗೆ ಎರಡು ರೀತಿಯ ಕಾಲದ ಅನುಭವಗಳನ್ನು ಕೊಡುವಂಥದ್ದಾಗಿದೆ. ಮೊದಲನೆಯದು ಮತ್ತೆ ಮರುಕಳಿಸಬಹುದಾದ (ಚಕ್ರಾತ್ಮಕ) ಕಾಲವಾದರೆ ಎರಡನೆಯದು ಮತ್ತೆ ಮರುಕಳಿಸಲಾಗದಂಥ (ಸರಳರೇಖಾತ್ಮಕ ಕಾಲ). ಹಿಂದೂ ಸಂಸ್ಕೃತಿಯಲ್ಲಿ ಇವೆರಡೂ ಕ್ರಮವಾಗಿ 'ಪರ' ಮತ್ತು 'ಇಹ'ಗಳ ಜಗತ್ತನ್ನು ಪ್ರಧಾನವಾಗಿ ನಿಯಂತ್ರಿಸಿವೆ ಎಂದು ಹೇಳಬಹುದು. ಒಂದರ್ಥದಲ್ಲಿ ಇದು 'ಆಧ್ಯಾತ್ಮಿಕ' ಮತ್ತು 'ನಿತ್ಯ ನೈಮಿತ್ತಿಕ' ಪರಿಸರಗಳಿಗೆ ಸಂಬಂಧಿಸಿದೆ. ಹೀಗೆ ನಮ್ಮ ಬದುಕಿನ ಎರಡು ಮುಖಗಳಿಗೆ ಸಂಬಂಧಿಸಿದ ಈ ಎರಡು ಭಿನ್ನ ರೀತಿಯ ಕಾಲದ ಪರಿಕಲ್ಪನೆಗಳಲ್ಲಿ ವೈಜ್ಞಾನಿಕವಾಗಿ ಸರಳ ರೇಖಾತ್ಮಕ ಕಾಲ ಮಾತ್ರ ನಿಜವಾದರೂ, ಐಡಿಯಲಾಜಿಕಲ್ ಹಂತದಲ್ಲಿ ಮರುಕಳಿಸಲಾಗುವ ಹಾಗೂ ಮರುಕಳಿಸಲಾಗದ ಕಾಲಗಳೆರಡನ್ನೂ ಕಲಬೆರಕೆ ಮಾಡುವುದರ ಮೂಲಕ ಮರುಕಳಿಸಲಾಗದ ಕಾಲದ ವಾಸ್ತವಿಕ ಸತ್ಯವನ್ನು ನಾವು ಅಲಕ್ಷಿಸಿ, ಅದನ್ನು ಗುರುತಿಸದೆ ಬಿಟ್ಟು ಅದು ಮತ್ತೆ ಮರುಕಳಿಸುತ್ತದೆ ಎಂದು ನಂಬಲು ನಮ್ಮ ಸಂಸ್ಕೃತಿ ಪ್ರಯತ್ನಿಸುತ್ತದೆ. ಹಾಗೆ ನಾವು ನೋಡಹೋದರೆ ಸಾವು ಒಂದು ವಾಸ್ತವತೆ ಮತ್ತು ಅಳಿದ ವ್ಯಕ್ತಿ ಎಂದೆಂದೂ ಮರಳಿ ಬಾರದಂತೆ ಬದುಕಿನ ಎಲ್ಲ ಎಳೆಗಳನ್ನು ಕಡಿದುಕೊಂಡು ಹೋಗಿರುವಂತಹ ವ್ಯಕ್ತಿ. ಅವನು ಎಂದೆಂದಿಗೂ ಯಾವ ಸ್ವರೂಪದಲ್ಲಿಯೂ ಮರಳಿ ಬಾರದಂತೆ ಹೋಗಿರುವಾತ. ಆದರೆ ಮರುಹುಟ್ಟಿನ ಆಶಯಕ್ಕೆ ಅವನನ್ನು ಒಳಪಡಿಸುವ ಪುರಾಣ, ಆಚರಣೆ, ನಂಬಿಕೆಗಳ ಮೂಲಕ ಅವನು ಮತ್ತೆ ಹುಟ್ಟಿ ಬರುತ್ತಾನೆ ಎಂದು ನಂಬಿಸಲು ಸಂಸ್ಕೃತಿ ಪ್ರಯತ್ನಿಸುತ್ತದೆ. ಹೀಗಾಗಿ ಹುಟ್ಟು ಸಾವನ್ನು ಮತ್ತು ಸಾವು ಹುಟ್ಟನ್ನು ಹಿಂಬಾಲಿಸುತ್ತಿರುವಂತೆ ಭಾಸವಾಗುತ್ತದೆ. (1988 : 186). ಸತ್ಯನಾಥರ ಈ ಮಾತುಗಳನ್ನು ಗೌಡರ ಅಂತ್ಯ ಸಂಸ್ಕಾರದ ವಿವರಗಳಿಗೆ ಅನ್ವಯಿಸಿ ನೋಡಿದಾಗ ಕೆಲವು ಸಮಸ್ಯೆಗಳು ಉದ್ಭವಿಸುತ್ತವೆ. ಮುಖ್ಯವಾಗಿ ನಾನು ಈಗಾಗಲೇ ಸ್ಪಷ್ಟಪಡಿಸಿದ ಮಧ್ಯಂತರ ಜಗತ್ತಿನ ಚಟುವಟಿಕೆಗಳು ಮತ್ತು 'ಹದಿನಾರರ ಕೊಲೆ'ಯ ಕ್ರಮಗಳಲ್ಲಿ ಸತ್ತವನನ್ನು ಮರುಹುಟ್ಟಿಗೆ ಒಳಪಡಿಸುವ ಆಶಯಗಳೇನೂ ಕಾಣಿಸುವುದಿಲ್ಲ. 'ಮಧ್ಯಂತರ' ಎಂಬ ಪದವೇ ಇರುವ ಮತ್ತು ಇಲ್ಲದಿರುವ ಸ್ಥಿತಿಯ ನಡುವಣ ಅವಸ್ಥೆಯಾಗಿದೆ. ಮೇಲಾಗಿ ಹದಿನಾರರ ಕೊಲೆಯಲ್ಲಿ ಹೊಸ ಎಲೆಯನ್ನು ಜೋಡಿಸುವ, ಮತ್ತು ಹಳೆಯದನ್ನು ಹೊರಕ್ಕೆಳೆಯುವ ಕೆಲಸ ನಡೆದೇ ತೀರುತ್ತದೆ. ಇದನ್ನು ಗಮನಿಸಿದರೆ, ಬ್ರಾಹ್ಮಣೇತರರ ಅಂತ್ಯಸಂಸ್ಕಾರ ವಿಧಿಗಳನ್ನು ಬೇರೆಯದೇ ಆದ ಚೌಕಟ್ಟಿನಲ್ಲಿರಿಸಿ ಅರ್ಥಮಾಡಿಕೊಳ್ಳಬೇಕೆಂದು ತೋರುತ್ತದೆ.

4ನೇ ಪುಟದಿಂದ

ಪೊಲೀಸ್ ವರಿಷ್ಠಾಧಿಕಾರಿ ಉಮೇಶ್‌ಕುಮಾರ್, ತಹಶೀಲ್ದಾರ್ ವಿ. ಎಲ್. ಹೆಗಡೆ ಮೊದಲಾದವರು ಹುತಾತ್ಮ ಯೋಧನ ಅಂತಿಮ ದರ್ಶನ ಪಡೆದರು.

1-5-2001ರ ಬೆಳಗ್ಗೆ ೯ ಗಂಟೆಯಿಂದ ಸಾರ್ವಜನಿಕ ವೀಕ್ಷಣೆಗೆ ಇರಿಸಲಾಗಿದ್ದ ಪುಷ್ಪಗಳಿಂದಾವೃತ ಯೋಧನ ಪಾರ್ಥೀವ ಶರೀರವನ್ನು ಮಧ್ಯಾಹ್ನ ೧೨.೩೦ ಗಂಟೆಗೆ ವ್ಯಾನೊಂದರಲ್ಲಿ ಮೆರವಣಿಗೆಯ ಮೂಲಕ ಟೋಲ್‌ಗೇಟ್, ಖಾಸಗಿ ಬಸ್ ನಿಲ್ದಾಣ, ಕಾಲೇಜು ರಸ್ತೆ, ವೆಬ್ಸ್ ರಸ್ತೆಗಾಗಿ ಸ್ಟೀವರ್ಟ್ ಹಿಲ್ ಬಳಿಯ ಗೌಡ ಜನಾಂಗದ ರುದ್ರ ಭೂಮಿಗೆ ಕೊಂಡೊಯ್ಯಲಾಯಿತು. ಇದೇ ಸಂದರ್ಭ ಕೇಂದ್ರ ಜವಳಿ ಖಾತೆ ಸಹಾಯಕ ಸಚಿವರಾದ ವಿ. ಧನಂಜಯ್ ಕುಮಾರ್ ಅವರು ಸ್ಥಳಕ್ಕಾಗಮಿಸಿ ವೀರಯೋಧನಿಗೆ ಪುಷ್ಪಗುಚ್ಛವನ್ನಿರಿಸಿ ಅಂತಿಮ ಗೌರವ ಸಲ್ಲಿಸಿದರು. ಜಿಲ್ಲಾ ಪೊಲೀಸ್ ಇಲಾಖೆ ವತಿಯಿಂದ ಮೂರು ಸುತ್ತಿನ ಗುಂಡು ಹಾರಿಸಿ ಯೋಧನಿಗೆ ಗೌರವ ರಕ್ಷೆಯನ್ನು ನೀಡಲಾಯಿತು. ಡಿವೈಎಸ್ಪಿ ರಾಜೇಂದ್ರ ಪ್ರಸಾದ್, ವೃತ್ತ ನಿರೀಕ್ಷಕ ಮಾದಯ್ಯ, ಕಂಬನಿದುಂಬಿದ ಸಹಸ್ರಾರು ಮಂದಿ ನಾಗರಿಕರು ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡಿದ್ದರು.

ಭರತ ಖಂಡದ ನೆಲದ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಮುಡಿಪಾಗಿಟ್ಟು ಹುತಾತ್ಮನಾದ ಆಮೆಮನೆ ಪ್ರಕಾಶ್, ಪ್ರಕೃತಿಯಲ್ಲಿ ಲೀನವಾಗುವುದರೊಂದಿಗೆ ಚರಿತ್ರೆಯ ಪುಟಗಳಲ್ಲಿ ಸೇರ್ಪಡೆಗೊಂಡರು.

- ಸಂಗಾತಿ

---

ಮೇಲೆ ಚರ್ಚಿಸಿದ ನಾಲ್ಕು ಅಂಶಗಳು ಬ್ರಾಹ್ಮಣೇತರರ ಅಂತ್ಯ ಸಂಸ್ಕಾರದ ಅಧ್ಯಯನಕ್ಕೆ ಬೇಕಾದ ನೆಲೆಯನ್ನು ಒದಗಿಸಿಕೊಡುತ್ತದೆ. ಈ ನೆಲೆಗಳು ಇದುವರೆಗೆ ಅಂತ್ಯ ಸಂಸ್ಕಾರದ ಬಗೆಗೆ ನಡೆದ ಅದ್ಯಯನಗಳಿಗಿಂತ ಭಿನ್ನವಾದ ನಿಲುವುಗಳನ್ನು ತಳೆಯಲು ನಮ್ಮನ್ನು ಒತ್ತಾಯಿಸುತ್ತವೆ. ಪ್ರಸ್ತುತ ಲೇಖನದ ಉದ್ದೇಶವೂ ಅಷ್ಟಕ್ಕೆ ಸೀಮಿತವಾಗಿದೆ.

**ಕೊನೆ ಟಿಪ್ಪಣಿಗಳು**

1. ಗೌಡರ ಬಗೆಗಿನ ಹೆಚ್ಚಿನ ವಿವರಗಳಿಗೆ ನೋಡಿರಿ. ಪುರುಷೋತ್ತಮ ಬಿಳಿಮಲೆ 1985.

2. "ದೇವರು ಹೇಗೆ ಬರೆದಿದ್ದಾರೋ ಹಾಗೆಯೇ ಬದುಕಿದೆ, ಮನೆಯವರಿಗೆ ಒಳ್ಳೆಯದನ್ನು ಮಾಡಿದೆ. ಕುಟುಂಬದವರನ್ನು ಒಳ್ಳೆಯದಾಗಿ ನೋಡಿಕೊಂಡೆ. ಬೇಕಾದ ಬದುಕು ಮಾಡಿದೆ ; ಮಕ್ಕಳಿಗೆ ಮೊಮ್ಮಕ್ಕಳಿಗೆ ಉಳಿಸಿದೆ. ಎಲ್ಲರೂ 'ಸರಿ' ಎಂದು ಹೇಳುವಂತೆ ಬಾಳುವೆ ಮಾಡಿದೆ. ಇವತ್ತಿಗೆ ನಿನಗೆ ಈ ಮಣ್ಣಿನ ಋಣ ತೀರಿತು. ನಿನ್ನ ಹೆಸರಲ್ಲಿ ನಾವು ನಾಲ್ಕು ಜನ ಇವತ್ತು ಇಲ್ಲಿಗೆ ಬಂದಿದ್ದೇವೆ. ನಾವು ತಂದದ್ದನ್ನು ನೀವು ತೆಗೆದುಕೊಳ್ಳಬೇಕು. ಸ್ವರ್ಗಕ್ಕೆ ಹೋಗಿ".

3. ಕೊಲೆ ಮದುವೆಯ ವಿವರಗಳಿಗೆ ನೋಡಿರಿ.

ಪುರುಷೋತ್ತಮ ಬಿಳಿಮಲೆ 1985, ಪಾಲ್ತಾಡಿ ರಾಮಕೃಷ್ಣ ಆಚಾರ್ 1990.

4. ಮೂಲದಲ್ಲಿ ಅದು Lateral Symbolism, Spatial Symbolism, Cultnary Symbolism, Acoustic Symbolism ಎಂದಿದೆ.

5. ಕುಲದ ಕಲ್ಪನೆಯೇ 'ಕುಲೆ' ಅಥವಾ 'ಕೊಲೆ'ಯ ಕಲ್ಪನೆಗೆ ಕಾರಣವಾದಂತಿದೆ.

**ಗ್ರಂಥ ಋಣ : ಅ. ಕನ್ನಡ**

1. ಕುಲಕರ್ಣಿ ಕೃ. ಶ್ರೀ (ಸಂ) 1983, ವಿಧಿಯುಕ್ತ ಶ್ರಾದ್ಧಕರ್ಮ, ಹುಬ್ಬಳ್ಳಿ : ಕುಲಕರ್ಣಿ ಬುಕ್ ಡಿಪೋ.

2. ಪುರುಷೋತ್ತಮ ಬಿಳಿಮಲೆ 1985, ಸುಳ್ಯ ಪರಿಸರದ ಗೌಡ ಜನಾಂಗ : ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ, ಮಂಗಳೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಮಹಾಪ್ರಬಂಧ) ಮಂಗಳ ಗಂಗೋತ್ರಿ, ಭಾನುಮತಿ ವೈ.ಸಿ. 1993, ಮಲೆನಾಡ ಶೈವ ಒಕ್ಕಲಿಗರು ; ಮೈಸೂರು.

3. ರಾಮಕೃಷ್ಣ ಶಾಸ್ತ್ರಿ ಬನವತಿ (ಸಂ) 1985, ಯಜೂಷ ಪೈತೃಮೇಧಿಕ ಪ್ರಯೋಗ ; ಬೆಂಗಳೂರು : ಬನವತಿ ಮುದ್ರಣಾಲಯ.

4. ಶಂಭುಶರ್ಮ 1960, ಶ್ರಾದ್ಧ ಪ್ರಯೋಗ, ಹೊನ್ನಾವರ : ಜ್ಯೋತಿಷ್ಯ ಕಾರ್ಯಾಲಯ

5. ಸತ್ಯನಾಥ ಟಿ.ಎಸ್. 1988, ಕನ್ನಡ ಜಾನಪದ ಕೆಲವು ಮುಖಗಳು, ಬೆಂಗಳೂರು : ಶಾರದಾ ಪ್ರಕಾಶನ

**ಆ. ಇಂಗ್ಲೀಷ್**

6. Beck, Brenda E.F. 1976. The Symbolic Merger of Body, Space and Cosmos in hindu Tamil Nadu ; (In contributions to Indian Sociology 10-2 (ed) T.N. Madan) Delhi.

7. Block on and Parry J.P. 1982. Introduction (In Death and Regeneration of life). Newyork : cambridge University Press)

8. Dass Veena 1977, Structure and Cognition ; Delhi : Oxford University Press.

9. Douglas, Mary 1966. Purity and Danger : An analysis of Concept of Pollution and Taboo, London : Routledge and Kegan Paul.

10. Dumunt Louis 1970. Homo Hierarchieus, London : Weidenfeld and Nichalson.

11. Hamilton, James W. 1976. Structure, Function and Idealogy of a Karen Funeral in Northern Thailand (In changing Identities in Modern South East Asia ; The Hague : Mouton Publishers.

12. Har G.L. 1980. The theory of reincarnation among the Tamils (In Karma and Rebirth in classical Indian Traditions) Berkely and Las-Angeles : University of California Press.

13. Hertz Robert 1960. Death and the Right hand ; London : Cahen and West.

14. Hiebert P.G. 1983, Karma and other explanation Traditions in a South Indian Village (In Karma : An Anthropological enquiry) Berkely and Los-Angles : University of California Press.

15. Inden R.B. and Nicholas R.W. 1977, Kinship in Bengali Culture, Chicago : The University of Chicago Press.

16. Kaushik, Meena 1976, The Symbolic Representation of Death. (In contributions to Indian Sociology 10-2) Delhi.

17. Knipe D.M. 1977, Sapindikarana : The Hindu rite of entery in to heaven (In Religious Encounters with Death : Insights from the History and Anthropology of Religions, University Park : The Pennsylvanla State University Press.

18. Leach E.R. 1961, Rethinking Anthropology, London : Athlone Press

19. Obeyesekere Gananatha G 1980, The Rebirth eschatology and its Transformations : A contribution to the Sociology of early Buddhism (In Karma and Rebirth in Classical Indian Traditions) Berkley and Los-Angeles : University of California Press

20. O'Flahery W.D. 1980, Karma and Rebirth in the Vedas and Puranas (In Karma and Rebirth in Classical Indian Traditions) Berkely and Los-angeles : University of California Press.

21. Parry J.P. 1982, Sacrificial death and the necrophagous ascetic (In Death and the Regeneration of Life) New York : Cambridge University Press.

22. Shrinivas M.N. 1978, Religion and Society Among the Coorgs of South India, Bombay : Media Promoters and Publishers.

23. Turner V. W. 1969, The ritual Process : Structure and Anti-structure, London : Routledge and Kegon Paul.

24. Van Gennep, Amald 1960, The Rites of Pssage, London : Routledge and Kegan Paul.

---

**ದಕ್ಷಿಣ ನೈರುತ್ಯದ ದ್ವಾರಾಗಮನ - ಸುದತಿಯರಿಗೆ ಸಂಕಟ ಪ್ರಧಾನ**

## ❋ ಪೂಜ್ಯ ಹಿರಿಯರ ಚಿರಸ್ಮರಣೆ ❋



ನೀವು ಕಾಲಕಂಡು ಸಾಕಷ್ಟು ಸಮಯ ಕಳೆದರು ಸದಾ ನಮ್ಮ ನೆನಪಿನಲ್ಲಿರುವಿರಿ. ನೀವು ನಮಗೆ ದಾರಿದೀಪವಾಗಿ ಸಂಗಾತಿಯನ್ನು ಹುಟ್ಟು ಹಾಕಲು ಪ್ರೇರೆಪಿಸಿದ್ದೀರಿ ಮತ್ತು ಕೈ ಹಿಡಿದು ಮುನ್ನೆಡೆಸುತ್ತಿದ್ದೀರಿ. ನಮ್ಮ ಸ್ಮೃತಿಪಟಲದಲ್ಲಿ ಅನುದಿನವು ನೆಲೆಸಿರುವ ನೀವು ಇಂದು ನಮ್ಮೆಲ್ಲರನ್ನು ಹರಸುವ ಪೂಜ್ಯರಾಗಿದ್ದೀರಿ.

" ಸತ್ಯವೇ ತಾಯಿ ತಂದೆ "



ದಿ. ಪಟ್ಟಡ ಕಾರ್ಯಪ್ಪ ಮುತ್ತಣ
ಜನನ : 12-5-1905
ಮರಣ : 29-5-1986

ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳು, ಮರಿ ಮಕ್ಕಳು ಹಾಗೂ ಅಪಾರ ಬಂಧು ಬಳಗದವರು

ದಿ. ಪಟ್ಟಡ ನೀಲವ್ವ ಮುತ್ತಣ
ಜನನ : 20-5-1919
ಮರಣ : 6-5-1974

---



ಗುತ್ತಿಮುಂಡನ ದಿ. ಸೋಮಯ್ಯ

## ಚಿರಸ್ಮರಣೆ

ಜನನ : 1938 ಮರಣ : 8-5-2000

ನೀವು ನೀವು ನಮ್ಮನ್ನಗಲಿ ಒಂದು ವರ್ಷ ಕಳೆದರೂ ನಿಮ್ಮ ಸವಿನೆನಪು ನಮ್ಮೆಲ್ಲರಲ್ಲಿ ಹಚ್ಚ ಹಸಿರಾಗಿ ಉಳಿದಿದೆ. ನಿಮ್ಮ ಆದರ್ಶ ಗುಣಗಳು ನಮಗಾಗಿ ಮತ್ತು ಜನರಿಗಾಗಿ. ನಮ್ಮೆಲ್ಲರ ನೆನಪುಗಳಲ್ಲಿ ನಿಮ್ಮ ಆತ್ಮಕ್ಕೆ ಆ ಭಗವಂತನು ಸದಾ ಚಿರಶಾಂತಿ ನೀಡಲೆಂದು ನಾವೆಲ್ಲರೂ ದೇವರಲ್ಲಿ ಪ್ರಾರ್ಥಿಸುತ್ತೇವೆ.

ತಂಗಿ : ಪಟ್ಟಡ ಪೂವಮ್ಮ ಜಯರಾಮ್
ಬಾವ : ಪಟ್ಟಡ ನಂಜುಂಡ ಜಯರಾಮ್
ಮಕ್ಕಳು : ದಿವ್ಯ, ದೀಪಕ್, ಉಷಾ

---



ಕೊಂಪುಳಿರ ಕುಟ್ಟಪ್ಪ
(ಅಬ್ಕಾರಿ ಇಲಾಖೆ)

## ನಿಧನ

ಜನನ : 24-4-1955 ಮರಣ : 27-2-2001

ದಿನಾಂಕ 27-2-2001 ರಲ್ಲಿ ನನ ಪತಿ ದಿ. **ಕೊಂಪುಳಿರ ಕುಟ್ಟಪ್ಪನವರ** ಅಂತ್ಯ ಸಂಸ್ಕಾರದಲ್ಲಿ ಭಾಗಿಯಾಗಿ ಸಹಕರಿಸಿದ ಸರ್ವ ಬಂಧು ಮಿತ್ರರಿಗೆಲ್ಲರಿಗೂ ವಂದನೆಗಳು. ಮೃತರ ಆತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಅನುದಿನವು ನೀಡಲೆಂದು ಪ್ರಾರ್ಥಿಸುವೆವು.

ದುಃಖತಪ್ತ ಪತ್ನಿ : **ಕೆ. ಕೆ. ಪುಷ್ಪ**
ಮಕ್ಕಳು : **ಗಿರಿಧರ ಮತ್ತು ಶಶಿಧರ**
ಬೆಟ್ಟತ್ತೂರು ಗ್ರಾಮ, ಮದೆ ಅಂಚೆ

---



ಮೊಟ್ಟನ ನಾಣಯ್ಯ ವರುಣಕುಮಾರ್ (ಕನು)
ಹೇರೂರು, ಸುಂಟಿಕೊಪ್ಪ

## ನಿಧನ

ಜನನ : ಮರಣ : 5-5-2001

ನೀನು ನಮ್ಮನ್ನಗಲಿದರೂ, ನೀನು ನಲಿದಾಡಿದ ಕಳೆದ ದಿನಗಳ ನೆನಪು ಸದಾ ನಮ್ಮನ್ನು ನೆನಪಿಸುತ್ತಿರುತ್ತದೆ. ದೇವರು ನಿನ್ನ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುವ

ನಿನ್ನ ಮಾವ : **ತಡಿಯಪ್ಪನ ಕುಮಾರ ಜಯ,**
ಮೈಸೂರು
☎ : 0821 / 568574

**Reg. No. KA/SK/MYS-88** **Registered : 10-01-96 TCI Kar. 09592**

# ಕೊಡಗು ಸಂಗಾತಿಯ ಓದುಗರಿಗೊಂದು ಪತ್ರ

ಪ್ರಿಯ ಓದುಗ ಮಿತ್ರರೇ,

ಕಳೆದ ಸಮಾರು ಒಂದು ವರ್ಷದಿಂದ ಕೊಡಗು ಸಂಗಾತಿಯ ಸಂಪಾದಕರು ಸಂಗಾತಿಯ ಓದುಗರು ಚಂದಾ ಹಣವನ್ನು ಕಳಿಸಿಕೊಡುವಂತೆ ಮತ್ತೆ ಮತ್ತೆಬರೆದಿದ್ದಾರೆ. 1999ಕ್ಕಿಂತ ಹಿಂದಿನಿಂದಚಂದಾ ಉಳಿಸಿಕೊಂಡವರಿಗೆ ಈ ಸಲದಿಂದ ಪತ್ರಿಕೆಯನ್ನು ಕಳುಹಿಸಿಕೊಡುವುದಿಲ್ಲವೆಂದಲೂ ಅವರು ಈ ಸಲ ಸೂಚಿಸಿದ್ದಾರೆ. (ಸಂಘಟನ,ಸಂಚಿಕೆ 8). ಇದು ತುಂಬಾ ವಿಷಾದದ ಸಂಗತಿಯಾಗಿದೆ. ಗೌಡ ಸಮುದಾಯದ ಹಿತದೃಷ್ಟಿಯಿಂದ ಇದೊಂದು ಭಾರೀ ಹಿನ್ನಡೆಯಾಗಿದೆ. ಪತ್ರಿಕೆ ನಿಂತರೆ ಅದು ಸಮುದಾಯದ ಅಭಿವೃದ್ಧಿಗೆ ಸಂಬಂಧಿಸಿದಂತೆ ದೊಡ್ಡದಾದ ಹೊಡೆತವಾಗುತ್ತದೆ. ಎಲ್ಲರೂ ಇದನ್ನು ಅತ್ಯಂತ ಗಂಭೀರವಾಗಿ ಪರಿಶೀಲಿಸಬೇಕೆಂದು ನಾನು ವಿನಂತಿಸಿ ಕೊಳ್ಳುತ್ತೇನೆ.

ಪತ್ರಿಕೆಗೆ ಈಗ ಐದು ವರ್ಷ ತುಂಬಿದೆ. ಪುಟ್ಟ ಸಮುದಾಯವೊಂದನ್ನು ಗುರಿಯಾಗಿರಿಸಿಕೊಂಡು, ಇಂಥ ಪತ್ರಿಕೆಯೊಂದನ್ನು ನಿರಂತರವಾಗಿ ಐದು ವರ್ಷಗಳವರೆಗೆ ಪ್ರಕಟ ಪಡಿಸಿದ ಪಟ್ಟಡ ಶೀಲಾಮಣಿ, ಪ್ರಭಾಕರ ಮತ್ತಿತರರು ನಮ್ಮೆಲ್ಲರ ಅಭಿನಂದನೆಗೆ ಅರ್ಹರು. ಎಂತೆಂಥವರೋ ಪತ್ರಿಕೆಗಳನ್ನು ನಿಲ್ಲಿಸಿರುವಾಗ ಪ್ರತಿ ಹದಿನೈದು ದಿನಕ್ಕೊಮ್ಮೆ ನಿರಂತರವಾಗಿ 128 ಸಂಚಿಕೆಗಳನ್ನು ಹೊರತಂದಿರುವುದು ನಿಜಕ್ಕು ಸಾಹಸದ ಸಂಗತಿಯಾಗಿದೆ. ನಿಮಗೆಲ್ಲರಿಗೂ ತಿಳಿದಿರುವಂತೆ ಗೌಡ ಸಮುದಾಯದಲ್ಲಿ ವಿದ್ಯಾವಂತರ ಸಂಖ್ಯೆ ಕಡಿಮೆ. ಅದರಲ್ಲೂ ಸಾಂಹಿತ್ಯ-ಸಂಸ್ಕೃತಿ-ಚರಿತ್ರೆ ಮಾನವಿಕಗಳ ಕ್ಷೇತ್ರದಲ್ಲಿ ಕೈಯಾಡಿಸುವವರ ಸಂಖ್ಯೆ ಇನ್ನು ಕಡಿಮೆ. ಈ ಕುರಿತು ಬರೆದರೆ ಓದುವವರು ಇಲ್ಲ. ಮೇಲಾಗಿ ನಮ್ಮಲ್ಲಿ ಸಂಘಟನಾತ್ಮಕ ಭಾವನೆಯು ಕಡಿಮೆ. ಇಂಥ ನಿರುತ್ಸಾಹದಾಯಕ ಸಂದರ್ಭದಲ್ಲಿ ಪತ್ರಿಕೆ ನಡೆಸುವುದೆಂದರೆ ಅದೊಂದು ಛಲದ, ಮುನ್ನುಗ್ಗುವ, ಹಣ ಕಳೆದುಕೊಳ್ಳುವ ಕೆಲಸ. ಯಾರಾದರೂ ಇಂಥ ಹುಚ್ಚು ಧೈರ್ಯಕ್ಕೆ ಮುಂದಾದರೆ ಅವರ ಬೆನ್ನು ತಟ್ಟಬೇಕಾದ್ದು, ಪ್ರೋತ್ಸಾಹಿಸಿಬೇಕಾದ್ದು ನಮ್ಮ ನೈತಿಕ ಕರ್ತವ್ಯ. ನಮ್ಮೆಲ್ಲಾ ತೊಂದರೆಗಳ ನಡುವೆಯೂ ನಾವಿದನ್ನು ಮಾಡಬೇಕಾಗಿದೆ. ನಮ್ಮ ಮುಂದಿನ ತಲೆಮಾರುಗಳಿಗೆ ಪರಂಪರೆಯನ್ನು ದಾಟಿಸುವ, ಹಾಗೆ ದಾಟಿಸುವ ಕೆಲಸ ಮಾಡುವುದರ ಮೂಲಕ ಅದನ್ನು ಉಜ್ವಲಿಸುವ ಕೆಲಸವಿದು. ನಮ್ಮ ಹೊಣೆಗಾರಿಕೆಯನ್ನು ನಾವು ಸಮರ್ಥವಾಗಿ ನಿರ್ವಹಿಸಬೇಕಾಗಿದೆ.

ಇಂದಿನ ಜಾಗತೀಕರಣ ಪ್ರಕ್ರಿಯೆಯಲ್ಲಿ ಜಗತ್ತಿನ ಪುಟ್ಟ ಸಮುದಾಯಗಳೆಲ್ಲ ನಾಮಾವಶೇಷವಾಗುತ್ತಿದೆ. ಪುಟ್ಟ ರಾಷ್ಟ್ರಗಳನ್ನು ಅಮೇರಿಕಾ ನುಂಗಿ ಹಾಕುತ್ತಿದೆ. ಹೀಗೆ ನಾಮಾವಶೇಷವಾಗಿ ಬಿಡಬಹುದಾದ ಜನಸಮುದಾಯಗಳಲ್ಲಿ ಗೌಡಸಮುದಾಯವೂ ಒಂದು ಎಂದರೆ ನಿಮಗೆ ಅಚ್ಚರಿ ಆಗಬಹುದು. ನಮ್ಮ ಮಕ್ಕಳೆಲ್ಲ ಅರೆಭಾಷೆ ಬಿಟ್ಟು ಇಂಗ್ಲೀಷಿನತ್ತ ಹೊರಳಿವೆ. ಇಂಗ್ಲೀಷ್ ಕಲಿಯಲಾಗದ ಬಡವರ ಮಕ್ಕಳು ಕನ್ನಡ ಶಾಲೆಗಳಲ್ಲಿ ಸೊರಗುತ್ತಿದ್ದಾರೆ. ಗೌಡರ ರಾಜಕೀಯ ಶಕ್ತಿ ವೀರಶೈವರ, ಕುರುಬರ, ಬ್ರಾಹ್ಮಣರ ಶಕ್ತಿ ರಾಜಕಾರಣರಷ್ಟು ಬಲವಾಗಿಲ್ಲ. ಇಂಥ ಬಿಕ್ಕಟ್ಟಿನ ಕ್ಷಣಗಳಲ್ಲಿ ನಾವು ನಮ್ಮ ಇತಿಹಾಸದ ಬಗ್ಗೆ ಕನಸು ಕಾಣುತ್ತಾ, ಅದರ ವೈಭವವನ್ನು ಹಾಡಿ ಹೊಗಳುತ್ತಾ ಮೈಮರೆಯುವುದರಿಂದ ವಿಶೇಷ ಪ್ರಯೋಜವಿಲ್ಲ. ಪರಂಪರೆಯ ಅತ್ಯುನ್ನತ ಮೌಲ್ಯಗಳನ್ನು ನೆನಸಿಕೊಂಡು ನಾವು ಮುಂದೆ ಸಾಗಬೇಕಾಗಿದೆ. ನಮ್ಮ ಒಂದು ಹೆಜ್ಜೆ ಎಂದರೆ, ಅದು ಅನಂತವಾದ ಇತಿಹಾಸದಿಂದ ಬಂದ ಬಳುವಳಿ, ಹಾಗೇ ಅನಂತವಾದ ಭವಿಷ್ಯದತ್ತ ಇಡುವ ಮೊದಲ ಹೆಜ್ಜೆಯೂ ಹೌದು. ಇತಿಹಾಸಕ್ಕೇ ಅಂಟಿಕೊಂಡವರಿಗೆ ಭವಿಷ್ಯದ ಹಾದಿ ಕಾಣಲಾರದು. ಹಾಗೆಯೇ ಕೇವಲ ಭವಿಷ್ಯದತ್ತ ಇಣುಕುವ ಮಂದಿಗಳಿಗೆ ಇತಿಹಾಸದ ಬೆಂಬಲ ಇಲ್ಲದ್ದರಿಂದ ಅವರು ಎಡಬಿಡಂಗಿಗಳಾಗುತ್ತಾರೆ. ಕೊಡಗು ಸಂಗಾತಿಯಂಥ ಪುಟ್ಟ ಪತ್ರಿಕೆಯು ಇತಿಹಾಸ ಮತ್ತು ಭವಿಷ್ಯವನ್ನು ಬೆಸೆಯುವ ಒಂದು ಸುವರ್ಣ ಮಾಧ್ಯಮ.

ನಾನು ಕಳೆದ ಐದು ವರ್ಷಗಳಿಂದ ಸಂಗಾತಿಯನ್ನು ನಿರಂತರವಾಗಿ ಓದುತ್ತಾ ಬಂದಿದ್ದೇನೆ. ಯಾವುದೇ ದೊಡ್ಡ ಪತ್ರಿಕೆಗಿಂತ ಇದರ ಉಪಯೋಗ ಕಡಿಮೆ ಎಂದು ನನಗನ್ನಿಸುವುದಿಲ್ಲ. ಅದು ಅನೇಕ ಹೊಸ ಬರಹಗಾರರನ್ನು ಬೆಳಕಿಗೆ ತಂದಿದೆ. ಪರಂಪರೆ-ಇತಿಹಾಸದ ಬಗೆಗೆ ಒಂದು ಬಗೆಯ ಅರಿವು ಮತ್ತು ಎಚ್ಚರಿಕೆ ಮೂಡಿಸಿದೆ. ಕೆಲವು ವಾಗ್ವಾದಗಳಿಗೆ ಎಡೆಮಾಡಿಕೊಟ್ಟಿದೆ. ಸೀಮಿತ ಅವಕಾಶದಲ್ಲಿ ಏನೆಲ್ಲಾ ಮಾಡಬಹುದೋ ಅದನ್ನೆಲ್ಲ ಮಾಡಿದೆ, ಪತ್ರಿಕೆ. ತೀರ ಗಂಭೀರವಾದ ಲೇಖನಗಳನ್ನು ಹಾಕಿದರೆ ಓದುವರ್‍ಯಾರು? ಗೌಡ ಸಮುದಾಯದ ಓದುಗರ ಬೌದ್ಧಿಕ ಮಟ್ಟದೊಂದಿಗೇ ಪತ್ರಿಕೆ ಕೆಲಸ ಮಾಡಬೇಕಾದ್ದರಿಂದ ಕೆಲವು ಅರೆಕೊರೆಗಳನ್ನು ಅದು ಒಳಗೊಳ್ಳಲೇಬೇಕಾಗುತ್ತದೆ. ಪತ್ರಿಕೆಯ ಮಿತಿಗಳು ನಮ್ಮೆಲ್ಲರ ಮಿತಿಗಳೂ ಆಗಿವೆ ಎಂಬುದನ್ನು ನಾವು ಎಚ್ಚರಿಕೆಯಿಂದ ಗಮನದಲ್ಲಿರಿಸಿ ಕೊಳ್ಳಬೇಕು.

ಪತ್ರಿಕೆಯ ಚಂದಾಹಣವೂ ಕೈಗೆಟುಕದಷ್ಟು ದೂರದಲ್ಲಿಲ್ಲ. ವರ್ಷಕ್ಕೆ 150/- ರೂಪಾಯಿಯನ್ನು ಕೊಡಲಾಗದಷ್ಟು ದಾರಿದ್ರ್ಯ ನಮ್ಮಲ್ಲಿಲ್ಲ. ಹಣವಿದ್ದವರು 2000 ರೂ. ಕೊಟ್ಟು ಜೀವಾವಧಿ ಸದಸ್ಯತನ ಕೊಡಬಹುದು. ಅಂಚೆ ಕಚೇರಿಗೆ ಹೋಗಿ ಎಂ. ಒ. ಮಾಡುವ ಇಲ್ಲವೇ ಒಂದು ಚೆಕ್ ಬರೆದು ಅಂಚೆಗೆ ಹಾಕುವಷ್ಟು ಸಮಯ, ತಾಳ್ಮೆ ನಮಗಿಲ್ಲವೇ? ಹೀಗಾಗಿ ಎಲ್ಲರಲ್ಲಿ ನನ್ನ ಪ್ರಾರ್ಥನೆ ಇಷ್ಟೆ. ಪತ್ರಿಕೆಯನ್ನು ನಾವೆಲ್ಲರೂ ಸೇರಿ ಉಳಿಸೋಣ. ಅದಕ್ಕಾಗಿ ಸ್ವಲ್ಪ ತ್ಯಾಗ ಮಾಡೋಣ.

ಕೊಡಗು ಸಂಗಾತಿಯು ತಿಂಗಳಿಗೊಮ್ಮೆಯಾದರೂ ಪ್ರಕಟ ಆಗುವಂತೆ ನಾವು ನೋಡಿಕೊಳ್ಳೋಣ. ಹಾಗೆ ಮಾಡದಿದ್ದರೆ ನಮ್ಮ ಮುಂದಿನ ತಲೆಮಾರು ನಮ್ಮನ್ನು ಕ್ಷಮಿಸಲಾರದು.

- ಪುರುಷೋತ್ತಮ ಬಿಳಿಮಲೆ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.